

ಶ್ರೀಶೇಷಾಚಲ ಪ್ರಸನ್ನ.

ಶ್ರೀ ಶೇಷಾಚಲ ಪ್ರೆಸ್ಸು ಮತ್ತು ಗ್ರಂಥಮಾಲೆ,
ಪೊ. ಆನಂದವನ, ಜಿ. ಧಾರವಾಡ.
श्री शेषाचल प्रेस व ग्रंथमाला.
पो. आनंदवन, जि. धारवाड
SHRI SHESHACHAL PRESS & GRANTHAMALA,
Manager.- B. P. KALE. Post. ANANDVAN, Dist. Dharwar.

# ಮಗನೇ ಅಲ್ಲ!!

ಅಥವಾ

# ವಿಚಿತ್ರ ಕಾರಸ್ಥಾನ!

ಲೇಖಕ:—ರಾಮಚಂದ್ರ ನರಸಿಂಗರಾವ ಮುಳಗಿ.

ಪ್ರಕಾಶಕ:— ಯ. ಗು. ಕುಲಕರ್ಣಿ,

ಸಂಪಾದಕ, ಸ. ಚ. ಆನಂದವನ.

೧೯೩೨

ಬೆಲೆ ೧ ೬.

हे पुस्तक भि. प. काळे, यानी आनंदवन-अगडि येथील आपल्या
श्री शेषाचल छापखान्यांत छापिले.

ಶ್ರೀ ಶೇಷಾಚಲ-

# ಸದ್ಬೋಧ ಚಂದ್ರಿಕೆ

पद्माकरं दिनकरो विकचीकरोति । चन्द्रो विकासयति कैरवचक्रवालं ॥
नाभ्यर्थितो जलधरोपि जलं ददाति । सन्तः स्वयं परहितेषु कृताभि योगाः ॥

| | | |
|---|---|---|
| ವರ್ಷ ೨೫ | ಆಷಾಢ ಶಕೆ ೧೮೫೪<br>July 1932. | ಸಂಚಿಕೆ ೪ |


## ೧ ಮಗನೇ ಅಲ್ಲ!!

### ಇದ್ದ ಮೂವ್ವರಲ್ಲಿ ಕದ್ದವರಾರು.-

"ರವಿಕಾಣದುದಂ ಕವಿಕಾಣ್ಬಂ"

ಮೊನ್ನೆ ಯಾರೋ ಹೇಳುತ್ತಿದ್ದರು, "ಶಾಸ್ತ್ರಜ್ಞರು ಹೆಚ್ಚು ಹೆಚ್ಚು ಕುಶಲತನದಿಂದ ಧನವನ್ನು ರಕ್ಷಿಸುವ ಉಪಾಯವನ್ನು ಕಂಡು ಹಿಡಿದರೆ, ಕಳ್ಳರು ಅದಕ್ಕೂ ಹೆಚ್ಚಿನ ಕುಶಲತನದಿಂದ ಅದನ್ನು ಅಪಹರಿಸುವ ಉಪಾಯವನ್ನು ಕಂಡು ಹಿಡಿಯುವರು," ಎಂದು. ಅದರ ಸತ್ಯತೆಯು ಈ ದಿನ 'ಜಯಲಕ್ಷ್ಮೀ' ಬ್ಯಾಂಕಿನಲ್ಲಿ ಕರತಲಾಮಲಕವಾಗಿದೆ. ಇಲ್ಲಿಯ ತಿಜೂರಿಯ (SAFE) ವೈಚಿತ್ರ್ಯವನ್ನು ವರ್ಣಿಸಲಳವಲ್ಲ! ಇದರ ಮುಂಭಾಗದಲ್ಲಿ ಅಕ್ಷರಗಳ ಚಕ್ರವೊಂದು ಕಾಣಬರುತ್ತಿತ್ತು. ಈ ಚಕ್ರದಲ್ಲಿಯ ಪ್ರತಿಯೊಂದು ಅಕ್ಷರವೂ ತಿರುಗುವಂತಿದ್ದು, ಬೇಕಾದ ಶಬ್ದವನ್ನು ಅದರಲ್ಲಿ ಜೋಡಿಸ ಬರುತ್ತಿತ್ತು. ಬ್ಯಾಂಕನ್ನು ಮುಚ್ಚುವ ಕಾಲದಲ್ಲಿ ಒಂದು ಸಂಕೇತದ ಶಬ್ದವನ್ನು ಮ್ಯಾನೇಜರನೂ, ಸರಾಫನೂ [ಕ್ಯಾಶಿಯರನೂ] ತಮ್ಮ ಪುಸ್ತಕದಲ್ಲಿ ಟಿಪ್ಪಣಿ ಮಾಡಿ, ಚಕ್ರದಲ್ಲಿಯ ಅಕ್ಷರಗಳನ್ನು ತಿರುಗಿಸಿಡುತ್ತಿದ್ದರು. ಅನಂತರ ಅವುಗಳ ಸ್ಥಾನವನ್ನು ಬದಲಿಸಲು ಕೀಲಿಯು ಗಟ್ಟಿಯಾಗಿ ಬೀಳುತ್ತಿತ್ತು. ಗೊತ್ತುಮಾಡಿದ ಶಬ್ದಯೋಜನೆಯನ್ನು ಪುನಃ ಕೂಡಿಸಲು ಬಾಗಿಲು ತೆರೆಯುತ್ತಿತು. ಇಂತಹ ವಿಚಿತ್ರ ತಿಜೂರಿಯಿಂದ ಈ ದಿನ ೫೮,೦೦೦|- ರೂ. ಗಳು ಕಳವಾಗಿವೆ!!

ಮ್ಯಾನೇಜರನ ದುಷ್ಕೃತ್ಯವೆಂದು ಸರಾಫನೂ, ಸರಾಫನ ದುಷ್ಕೃತ್ಯವೆಂದು ಮ್ಯಾನೇಜರನೂ ಪರಸ್ಪರರು ಸಂಶಯುಗಳಾಗಿದ್ದರು. ಕೊನೆಗೆ

ವ್ಯಾನೇಜರನು ಅಧಿಕಾರಯುಕ್ತವಾಣಿಯಿಂದ "ಎಲಾ ಭ್ರಷ್ಟಾ, ಇನ್ನಾದರೂ ನಿನ್ನ ತಪ್ಪನ್ನು ಒಪ್ಪಿಕೋ. ಆದದ್ದಾಯಿತು. ತೆಗೆದುಕೊಂಡ ಹಣವನ್ನು ತಿರುಗಿ ಕೊಡು; ಎಂದರೆ ನಿನಗಾವ ಕೇಡೂ ಬಾರದು'' ಎಂದನು. ಆಗ ಸರಾಫನು ಕೆಣಕಿದ ಕಾಳಸರ್ಪನಂತೆ ''ರಾಯರೇ, ಈ ವಿದ್ಯವನ್ನೆಲ್ಲಿ ಕಲಿತಿರಿ? ನೀವು ಹಣವನ್ನು ಎತ್ತಿ ಹಾಕಿ ನನ್ನ ಮೇಲೆ ತಪ್ಪುಹೊರಿಸುವಿರಾ?'' ಎಂದನು. ಇನ್ನೇನು? ಗೊತ್ತೇಯಿಸೆಯಿಲ್ಲ! ಬಡವನ ಸಿಟ್ಟು ದವಡೆಗೆ ಮೂಲ!

ಪೋಲೀಸ್ ಇನ್ಸಪೆಕ್ಟರ್‌ರು ಬಂದರು. ಯಾವಾಗಲೂ ದೊಡ್ಡ ದೊಡ್ಡವರ ಮನಸ್ಸು ಒಂದೇ ನೋಡಿರಿ! ಇನ್‌ಸ್ಪೆಕ್ಟರರು ವ್ಯಾನೇಜರರ ಮಾತು ದಿಟವೆಂದರು ಆಯಿತು. ಸರಾಫನಿಗೆ ಕಾರಾಗ್ರುಹ ವಾಸವಾಯಿತು. ಪೋಲೀಸರ ಕೆಲಸ. ತಪ್ಪು ಮಾಡಿದವರು ಯಾರಾದರೇನು? ಒಟ್ಟಿನ ಮೇಲೆ ಒಬ್ಬನಿಗೆ ಶಿಕ್ಷೆಯಾದರೆ ಆಯಿತು.

ವ್ಯಾನೇಜರನ ಹೆಸರು ಗುಂಡೇರಾಯ; ಕ್ಯಾಶಿಯರನ ಹೆಸರು ರಘುನಾಥರಾಯ. ಮೊದಲಿನಿಂದಲೂ ಪರಸ್ಪರರಲ್ಲಿ ಪ್ರೀತಿಯೂ, ನಂಬಿಕೆಯೂ ದೃಢವಾಗಿದ್ದವು. ಈ ಆಕಸ್ಮಿಕ ಪ್ರಸಂಗದಲ್ಲಿ ಇಬ್ಬರೂ ಭಯಭ್ರಾಂತರಾಗಿದ್ದರು.

ಮೊದಲೇ ತಿಳಿಸಲ್ಪಟ್ಟಂತೆ ಪತ್ತೇದಾರರಲ್ಲಿ ಶಿರೋಮಣಿಯಾದ ಭೀಮಸಿಂಗನು ಬಂದನು. ಯಾರ ಮೋರೆಯ ಮೇಲೂ ಕಳೆಯಿರಲಿಲ್ಲ. ಇನ್ಸಪೆಕ್ಟರ್ ಸಾಹೇಬರು ಎಲ್ಲವನ್ನೂ ವಿವರಿಸಿದರು. ತಾವು ಮಾಡಿದುದೆಲ್ಲವೂ ವಿಹಿತವೇ ಎಂದು ಪತ್ತೇದಾರನು ಹೇಳಿದನು. ಆಗ ಸಾಹೇಬರಿಗಾದ ಆನಂದವು ಇಂದ್ರನಿಗೆಂದೂ ಆಗಲಿಕ್ಕಿಲ್ಲ!

ಭೀಮಸಿಂಗನು ಅತ್ತಿತ್ತ ನೋಡಿದನು. ಚಂಚಲೆಯ ಮುಖವು ಗಾಬರಿಯಿಂದ ಬಾಡಿಹೋಗಿತ್ತು. ಚಂಚಲೆಯು ಗುಂಡೇರಾಯನ ಪ್ರೀತಿಯ ಹೆಂಡತಿಯು. ಅವಳ ಮಗಳೂ ಎದೆಗುಂದಿದ್ದಳು. ಅವಳ ಹೆಸರು ಇಂದುಮತಿ. ಇದರಿಂದ ವ್ಯಾನೇಜರನೇ ತಪ್ಪುಗಾರನೆಂದು ಭೀಮಸಿಂಗನ ಮನಸ್ಸಿಗೆ ಹೊಳೆದರೂ, ಮೊದಲಿನಿಂದಲೂ ಅವನನ್ನು ಬಲ್ಲವನಾದ್ದರಿಂದ ಭ್ರಾಂತಚಿತ್ತನಾದನು.

ಅನಂತರ ರಘುನಾಥರಾಯನೊಡನೆ ಬಂದೀವಾಸದ ಕಡೆಗೆ ಹರ್ಷದಿಂದ ಇನ್ಸಪೆಕ್ಟರರು ನಡೆದರು. ಭೀಮಸಿಂಗನು ಮ್ಲಾನವದನನಾಗಿ ತಿಜೂರಿಯ ಬಳಿಯಲ್ಲಿಯೇ ಕುಳಿತನು. ಇವನ ವಿಚಾರಕ್ಕೆ ಬೀಗದ ಮೇಲಿನ ಒಂದು ಗೀಚಿನ (Scratch) ಗುರುತುಮೂಲವಾಗಿತ್ತು. ಅದು ತೀರ ಹೊಸದೆಂದು ಸ್ಪಷ್ಟವಾಗಿ ಕಾಣುತ್ತಿತ್ತು. ಇಂತಹ ಗುರುತು ಬೀಳಲು ಕಾರಣವೇನೆಂದು ನಮ್ಮ ಪತ್ತೇ

ದಾರನು ಚಿಂತಿಸಿದನು. ಬೀಗವನ್ನು ಕೈಯಿಂದ ತೆಗೆಯುವಾಗ ಕೈ ಜಾರಿದರೆ ಅಂತಹ ಗೀಚು ಉಂಟಾಗುವದು ಅಶಕ್ಯವಾಗಿತ್ತು. ಒಂದು ವೇಳೆ ಕುಡುಕ (Drunkard)ನಾದ ಮನುಷ್ಯನು ಸ್ಮೃತಿಯಿಲ್ಲದ ವೇಳೆಯಲ್ಲಿ ಬೀಗವನ್ನು ಒತ್ತಾಯದಿಂದ ತೆಗೆಯಲೆತ್ನಿಸಿದರೆ ಹೀಗಾಗುವ ಸಂಭವವಿತ್ತು; ಆದರೆ ಗುಂಡೇ ರಾಯನೇ ಆಗಲಿ ಅಥವಾ ರಘುನಾಥರಾಯನಾಗಲಿ ಅಂತಹರಲ್ಲವೆಂಬದು ಭೀಮಸಿಂಗನಿಗೆ ಗೊತ್ತಿತ್ತು. ಹಾಗಾದರೆ ಇದರ ಮರ್ಮವೇನು? ಅದರ ಮರ್ಮವು ಭೀಮಸಿಂಗನಿಗೆ ಹೊಳೆಯಲು ಬಹಳ ಕಾಲ ಹಿಡಿಯಲಿಲ್ಲ. ಕೂಡಲೇ ಅವನು ಅದರ ಪ್ರಯೋಗವನ್ನು ಮಾಡಿನೋಡಲುಮನೆಗೆ ಹೋದನು.

ನಮ್ಮ ಪತ್ತೇದಾರನ ಮನೆಯ ದಿವಾಣಖಾನೆಯಲ್ಲಿಯೂ ಸಾಧಾರಣ ಪ್ರತಿಯ ಒಂದು ತಿಜೂರಿಯಿತ್ತು. ತಾನು ಅದರ ಬೀಗವನ್ನು ತೆಗೆಯಲೆತ್ನಿಸುವಂತೆಯೂ, ಆಗ ತನ್ನ ಕೈಯನ್ನು ಒತ್ತಾಯದಿಂದ ತನ್ನ ಆಳುಮಗನು ಎಳೆಯಬೇಕೆಂದೂ ಗೊತ್ತು ಮಾಡಿದನು. ಪ್ರಯೋಗವೇನೋ ಸರಿಹೋಯಿತು; ಅಂತಹ ಗೆರೆಯು ಇಲ್ಲಿಯೂ ಮೂಡಿತು; ಆದರೆ ಬ್ಯಾಂಕಿನ ತಿಜೂರಿಯಲ್ಲಿನ ಗೆರೆಯು ಆಗ್ನೇಯದ ಕಡೆಗೂ, ಇಲ್ಲಿಯ ಗೆರೆಯು ನೈಋತ್ಯದ ಕಡೆಗೂ ಹೋಗಿತ್ತು.

ಇದು ಭೀಮಸಿಂಗನಿಗೆ ಮಹತ್ವವೆನಿಸಲಿಲ್ಲ. ಒಟ್ಟಿನಲ್ಲಿ ಅವನು ತರ್ಕಿಸಿದ್ದೇನಂದರೆ,"ಕಳವನ್ನು ಮಾಡಿದುದು ಒಬ್ಬ ವ್ಯಕ್ತಿಯ ಸಾಹಸವಲ್ಲ; ಆಗ ಇಬ್ಬರಿದ್ದರು. ಒಬ್ಬನು ಕೀಲಿಯನ್ನು ತೆಗೆಯುವಾಗ, ಮತ್ತೊಬ್ಬನು ಬೇಡವೆಂದು ಬಲವಾಗಿ ಕೈಯನ್ನು ಎಳೆದಿರಬೇಕು. ಹೀಗೆ ಒಬ್ಬನ ಅಭಿಪ್ರಾಯವು ಮತ್ತೊಬ್ಬನ ಅಭಿಪ್ರಾಯಕ್ಕೆ ವಿರುದ್ಧವಾಗಿರಬೇಕು. ಗೆರೆಯು ನೈಋತ್ಯದ ಕಡೆಗೆ ತಿರುಗಿರಬೇಕಾದರೆ ಆ ಎರಡನೆಯ ವ್ಯಕ್ತಿಯು ಎಡಭಾಗದಲ್ಲಿ ನಿಂತಿರಬೇಕಾಗಿತ್ತು; ಆದರೆ ಅದೀಗ ಆಗ್ನೇಯಕ್ಕಿದೆ. ಇದರಿಂದ ಆ ಎರಡನೆಯ ವ್ಯಕ್ತಿಯು ಬಲಭಾಗದಲ್ಲಿದ್ದನೆಂಬುವದು ಸ್ಪಷ್ಟವಾದ ಮಾತು.

"ಹಾಗಾದರೆ ಆ ಕಳ್ಳನು ತನ್ನ ಪ್ರತಿಕೂಲನನ್ನೇಕೆ ಕರೆತಂದನು? ಇದರಿಂದ ಅವನು ಮೂರ್ಖನೆಂದು ತೋರುವದು; ಆದರೆ ಇದು ಸುಳ್ಳು; ಕಳ್ಳನು ಕೀಲಿಯನ್ನು ತೆಗೆಯುವಾಗ ಆ ಎರಡನೆಯ ವ್ಯಕ್ತಿಯು ಗುಪ್ತರೀತಿಯಿಂದ ಅಲ್ಲಿಗೆ ಬಂದಿರಬಹುದು! ಬಂದವನು ಆಟವನ್ನು ನೋಡುತ್ತ ನಿಲ್ಲದೆ, ಕೂಡಲೇ ಕಳ್ಳನ ಕೈಯಿಂದ ಬೀಗದ ಕೈಯನ್ನು ಕಸಿದುಕೊಂಡಿರಬೇಕು! ಇದರಿಂದ ನೋಡಲು,

ಎರಡನೆಯ ವ್ಯಕ್ತಿಯು ಹೊರಗಿನಿಂದ ಗುಪ್ತವಾಗಿ ಬರುವದು ಅಶಕ್ಯವೆಂದು ಮನಗಾಣುವದು. ಏಕೆಂದರೆ ಬಂದ ಕೂಡಲೆ, ಆ ವ್ಯಕ್ತಿಯು ಕಳ್ಳನ ಎಡ ಭಾಗದಲ್ಲಿ ನಿಂತು ಅವನು ಕೈಯನ್ನು ಸೆಳೆಯಬೇಕಾಗಿತ್ತು; ಕಳ್ಳನ ಬಲಗಡೆಯಲ್ಲಿ ಗೋಡೆಯು ಇದ್ದುದರಿಂದ, ಬಹಳ ಸಂಕೋಚವಾಗಿ ನಿಲ್ಲುವಷ್ಟು ಮಾತ್ರ ಸ್ಥಳವಿತ್ತು. ಇದರಿಂದ ನೋಡಲು ಕಳ್ಳನಿಗೆ ಪರಿಚಿತಿಯುಳ್ಳ ಒಂದು ವ್ಯಕ್ತಿಯು ಅವನೊಡನೆ ಬಂದು, ಅವನ ಬಲಭಾಗದಲ್ಲಿ ನಿಂತು, ಕೀಲಿಯನ್ನು ತೆಗೆಯುವ ಕಾಲದಲ್ಲಿ ಪ್ರತಿಬಂಧಕವನ್ನುಂಟುಮಾಡಿರಬೇಕು. ಆಗ ಕಳ್ಳನು ಅದಾವ ಉಪಾಯದಿಂದಲೋ ಆ ವ್ಯಕ್ತಿಯನ್ನು ಸಮಾಧಾನಗೊಳಿಸಿರಬೇಕು. ಇಲ್ಲದಿದ್ದರೆ ಇಬ್ಬರಿಗೂ ಮನಸ್ತಾಪವಾಗಿ ಕಾವಲುಗಾರರಿಗೂ, ಅಟ್ಟದ ಮೇಲಿರುವ ಗುಂಡೇರಾಯುಗೂ ಎಚ್ಚರವಾಗುವ ಸಂಭವವಿತ್ತು!

"ಕಳ್ಳನೊಡನೆ ವ್ಯಕ್ತಿಯು ಬಂದುದರಿಂದ ಮೊದಲಿನಲ್ಲಿ ಇಬ್ಬರ ಅಭಿಪ್ರಾಯವೂ ಒಂದೇ ಆಗಿರಬೇಕು. ಹಾಗಾದರೆ ಆರಕ್ಷಣದಲ್ಲಿ ಎರಡನೆಯ ವ್ಯಕ್ತಿಯ ಮನವು ಬದಲಾಗಿ ಪ್ರತಿಕೂಲವಾದುದೇಕೆ? ಬ್ಯಾಂಕಿನಲ್ಲಿಯ ಹಣವನ್ನು ಎತ್ತಿಹಾಕಿದರೆ ಈ ವ್ಯಕ್ತಿಗಾದ ಹಾನಿಯೇನು? ಹಾಗಾದರೆ ಹೀಗಿರಬಹುದು. ಅದಾವುದೋ ಗೂಢಕಾರಣದಿಂದ ಈ ಎರಡನೆಯ ವ್ಯಕ್ತಿಯು ಈ ಕೆಲಸದಲ್ಲಿ ಸಹಾಯ ಮಾಡಲು ಒಪ್ಪಿರಬೇಕು; ಆದರೆ ಬಿಕ್ಕಟ್ಟಿನ ಹೊತ್ತಿನಲ್ಲಿ ಅನುತಾಪವಾಗಿ ಗುಂಡೇರಾಯನಿಗೆ ಆಗಲಿ ಅಥವಾ ರಘುನಾಥರಾಯನಿಗೇ ಆಗಲಿ ಒದಗಬಹುದಾದ ಹಾನಿಯು ತನ್ನದೆಂದು ಅದು ಭಾವಿಸಿರಬೇಕು. ಇದರಿಂದ ನೋಡಲು, ಆ ಎರಡನೆಯ ವ್ಯಕ್ತಿಯು ಗುಂಡೇರಾಯನಿಗೆ ಅಥವಾ ರಘುನಾಥರಾಯನಿಗೆ ಬೇಕಾದವರಲ್ಲಿ ಒಬ್ಬನಾಗಿರಬೇಕು."

ಇಷ್ಟೆಲ್ಲವನ್ನು ವಿಚಾರಿಸಿದರೂ "ಆ ರಘುನಾಥರಾಯನೇಕೆ ಆ ವ್ಯಕ್ತಿಯಾಗಿರಬಾರದು? ಅಥವಾ ಅವನೇಕೆ ಕದ್ದಿರಬಾರದು?" ಎಂಬ ಮುಖ್ಯ ಪ್ರಶ್ನೆಯು ಹಾಗೆಯೇ ಉಳಿಯಿತು.

## ೨ ಇವೆಲ್ಲ ಸಾಧುಗಳಿಗೇಕೆ?

"ಬೆಳ್ಳಗಿದುದೆಲ್ಲ ಹಾಲಲ್ಲ"

ಈ ದಿನ ರಘುನಾಥರಾಯನ ಮನೆಯಲ್ಲಿ ಎಲ್ಲರಿಗೂ ಆನಂದ. ಅವನನ್ನು ಯೋಗ್ಯ ಜಾಮೀನಿನ(Security)ಮೇಲೆ ಸೆರೆಮನೆಯಿಂದ ಬಿಟ್ಟಿದ್ದಾರೆ! ಇದರ ಮೇಲೆ ಅವನ ತಂಗಿಯ ಹುಟ್ಟಿದ ದಿನ! ಬೆಂಗಳೂರು ನಗರವೆಲ್ಲ ಆನಂದದಿಂದ

ಕಾಣಿಯುವದೆಂದು ರಘುನಾಥರಾಯನ ಭಾವನೆಯಾಗಿದೆ. ಇವೆಲ್ಲಕ್ಕೂ ಕಳಸವನ್ನಿಡುವಂತೆ ಸಾಧುಗಳೊಬ್ಬರು ಮನೆಗೆ ಬಂದಿದ್ದಾರೆ. ಅವರ ಋಷಿಸದೃಶ ರೂಪದ ಕಾಂತಿಯಿಂದ ಮನೆಯಲ್ಲಿ ಅರುಣೋದಯವಾದಂತಿದೆ. ರಘುನಾಥನು ಗುರುಗಳೊಡನೆ ಬಹು ವಿನಯದಿಂದ ಮಾತನಾಡುತ್ತಲಿದ್ದಾನೆ. ಇಂತಹ ಸಮಯದಲ್ಲಿ ಅಂಚೆಯವನು ಒಂದು ಪತ್ರವನ್ನು ತಂದು ರಘುನಾಥನ ಕೈಯಲ್ಲಿ ಕೊಟ್ಟನು. ಅದರಲ್ಲಿ ೧೦೦ ರೂ. ಗಳ ಒಂದು ನೋಟೂ, ಬೇರೊಂದು ಪತ್ರವೂ ಇದ್ದವು. ಗುರುಗಳು ಆ ಪತ್ರವನ್ನು ಕಂಡು ಚಕಿತರಾಗಿ ಅದೇನೆಂದು ವಿಚಾರಿಸಿದರು. ಅದಕ್ಕವನು 'ಗುಪ್ತರೀತಿಯಿಂದ ಪತ್ರಬರೆಯುವ ಕ್ರಮವಿದು' ಎಂದು ಹೇಳಿದನು.

ಗುರುಗಳಲ್ಲಿ ಅತ್ಯಂತ ಭಕ್ತಿಯುಳ್ಳ ರಘುನಾಥರಾಯನು ಪತ್ರವನ್ನು ಅಲ್ಲೇ ಬಿಟ್ಟು ಹಣವನ್ನು ಪೆಟ್ಟಿಗೆಯಲ್ಲಿಡಲು ಒಳಕ್ಕೆ ಹೋದನು.

ಗುರುಗಳು ಪತ್ರವನ್ನು ತಿರುಗಿಸಿ ಅಂಚೆಯ ಮುದ್ರೆಯನ್ನು ನೋಡಿ ಅದು ಇದೇ ಊರಿನವರು ಬರೆದ ಪತ್ರವೆಂದು ತಿಳಿದುಕೊಂಡರು; ಮತ್ತು ಅದಾವ ಕೆಲಸಕ್ಕಾಗಿಯೋ ಆ ಪತ್ರದ ಪ್ರತಿ ನಕಲು ಮಾಡಿಕೊಂಡು ತಮ್ಮಲ್ಲಿಟ್ಟುಕೊಂಡರು.

ಮಾತಿನ ಮಾಲಿಕೆಯಲ್ಲಿ ಸಮಗ್ರವನ್ನು ಕೇಳಿ ಕೇಳಿ ತರ್ಕಿಸಿ ತರ್ಕಿಸಿ, ಬ್ಯಾಂಕಿನ ಕಳವಿನಲ್ಲಿ ರಘುನಾಥನಿಗೇನೂ ತಿಳಿಯದೆಂದು ಸಾಧುಗಳು ತಿಳಿದುಕೊಂಡರು.

## ೩ ಚಿತ್ರಮಯ ಪತ್ರ.

Little flower, if I could understand what you are, root and all, and all in all, I should know what God and man is"

ರಘುನಾಥರಾಯನಿಗೆ ಬರೆದ ಆ ಪತ್ರದ ಒಕ್ಕಣಿಕೆಯು ಹೀಗಿತ್ತು.

532 c2,10: 871 c1,5– ಉ; 630, c1,9 ‖ 512c2 10 +164, c2,6 369 c1,3+ನೆ? 96,c2,17:೧೦೦; 679,c1,22‖ 316,c2 17+ ಇದ್ದೇನೆ 474,c219: 501, c1, 10 + ಇ, ಬಾ,

ಮೇಲ್ಕಂಡ ಪತ್ರದಲ್ಲಿ ನಮ್ಮ ಪತ್ತೇದಾರ ಶಿರೋಮಣಿಯಾದ ಭೀಮಸಿಂಗನ ಮನಸ್ಸು ಸಂಪೂರ್ಣವಾಗಿ ಲೀನವಾಗಿತ್ತು. ತಾನು ಭೂಮಿಯ ಮೇಲೆ ಇರುವೆನೋ, ಅಥವಾ ಭೂಮಿಯೇ ತನ್ನ ಮೇಲೆ ಇರುವದೋ ಎನ್ನುವದನ್ನು ಸಹ ತಿಳಿಯಲಾರದಷ್ಟು ಪರವಶನಾಗಿದ್ದನು ಆ ದಿನದ ಸಂಜೆಯು ಕವಿಕಲ್ಪನೆಯು

ಸಂಜೆಯನ್ನು ಸಹ ಸ್ಪರ್ಧಿಸುವಷ್ಟು ಮನೋಹರವಾಗಿತ್ತು. ಅವನು ಇದ್ದಕ್ಕಿದ್ದ ಹಾಗೆಯೇ ಚಪ್ಪಾಳೆಯನ್ನು ಹೊಡೆಯಲು, ಮನೆಯ ಮುಂದಿನ ಹೂದೋಟದಲ್ಲಿ-ಸೌಂದರ್ಯದಲ್ಲಿ ತನ್ನನ್ನೇ ಹೋಲುವ ಹೂವುಗಳನ್ನು ಕೊಯ್ಯುತ್ತಿದ್ದ ಹರಿಣಿಯು ಭೀಮಸಿಂಗನಿದ್ದ ಕೊಠಡಿಗೆ ಬಂದಳು. ರೂಪದಲ್ಲಿ ಎಷ್ಟು ಶ್ರೇಷ್ಠ ತರಳೋ, ಚತುರತೆಯಲ್ಲಿಯೂ ಅಷ್ಟೇ ಶ್ರೇಷ್ಠಳಾದ ತನ್ನ ಪ್ರಿಯಕಾಂತೆಯನ್ನು ಅವನು ಕಂಡನು. ನಕ್ಕರೆ ರತ್ನಗಳು ಸುರಿಯಬಹುದೆಂಬ ಹೆದರಿಕೆಯಿಂದ ಉಕ್ಕಿ ಬರುವ ಸಂತಸದ ಸವಿನಗೆಯನ್ನು ತಡೆತಡೆಯುತ್ತ ಹರಿಣಿಯು ಮೆಲ್ಲಮೆಲ್ಲಗೆ ಹೀಗೆ ಕೇಳಿದಳು:

"ಪ್ರಿಯರೇ!—

"ಹಾ! ತಡೆ. ನಿನ್ನ ಪ್ರಶ್ನೆಯು ತಿಳಿಯಿತು. ಸ್ವಲ್ಪ ಕೂಡ್ರು. (ಹರಿಣಿಯು ಕುಳಿತ ಮೇಲೆ) ನಾನೊಂದು ಸಮಸ್ಯೆಯಲ್ಲಿ ಬಿದ್ದಿದ್ದೆ ಅದರ........" ಎಂದು ಭೀಮಸಿಂಗನು ನುಡಿದನು. ಅಷ್ಟರಲ್ಲಿ ಹರಿಣಿಯು: 'ಸರಿ! ಅದರ ಮರ್ಮವು ತಿಳಿಯಿತೋ"

ಭೀಮ:—"ರಮಣೀಮಣಿಯೇ! ನೀನು ನಿಜವಾಗಿ ಚತುರಳು. ಈ ವಿಷಯದಲ್ಲಿ ನಿನ್ನನ್ನೂ ವಿಚಾರಿಸಬೇಕೆಂದು ನನ್ನ ಮನಸ್ಸಿದೆ."

ಹರಿಣಿ: "ಹಾಗಾದರೆ ತಡವೇಕೆ? ನನಗೆಲ್ಲಾ ತಿಳಿಯುತ್ತದೆ. ನನ್ನನ್ನು ಪರೀಕ್ಷಿಸಬೇಕೆಂದೋ ಇದೆಲ್ಲ?"

ಭೀಮ:—"ಪ್ರಿಯೆ, ಅದರಿಂದ ನನಗೇನು ಉಪಯೋಗ? ನನ್ನ ತರ್ಕದ ಸತ್ಯತೆಯನ್ನು ಪರೀಕ್ಷಿಸಲು ನೀನು ನನಗೆ ಬೇಕು. ಈ ಪತ್ರವನ್ನು ತೆಗೆದುಕೋ. ಇದು ಅಸಲಿಗೆ ಸರಿಯಾದ ನಕಲು,"

ಹರಿಣಿ: "ಎಂದಮೇಲೆ ಬೇರೊಬ್ಬರ ಪತ್ರದ ನಕಲನ್ನು ನೀವು ತಂದಿರುತ್ತೀರಿ ಬಹಳ ಮಾಡಿ?

ಭೀಮ:—"ಬಹಳ ಮಾಡಿ ಪ್ರತಿಯೊಂದು ಸಂಖ್ಯೆಯೂ ವರ್ಣಮಾಲೆಯೊಳಗಿನ ಅಕ್ಷರಗಳ ಸಂಖ್ಯೆಯನ್ನು ಸೂಚಿಸಬಹುದಲ್ಲವೇ?"

ಹರಿಣಿ:—"ಒಂದು ವೇಳೆ ಹಾಗಿದ್ದರೆ ಈ ಪತ್ರದಲ್ಲಿ ಒತ್ತಕ್ಷರವುಳ್ಳ ಶಬ್ದಗಳೇ ಇಲ್ಲವೆ?"

ಭೀಮ: "ಛೆ! ಹಾಗೆಂದರೇನು? ಒಳ್ಳೇದು; ಈ ವಿಷಯದಲ್ಲಿ ನೀನು ಊಹಿಸುವದಾದರೂ ಏನು?"

ಹರಿಣಿ:—"ಮೊದಲಿನ ದೊಡ್ಡ ಸಂಖ್ಯೆಗಳು ದೊಡ್ಡದೊಂದು ಪುಸ್ತಕದ ಪುಟಗಳನ್ನು ಸೂಚಿಸಬಹುದು. ಉದಾಹರಣೆಗಾಗಿ ಮೊದಲಿನ ಸಂಖ್ಯೆಯಾದ 532 ನ್ನು ತೆಗೆದುಕೊಳ್ಳೋಣ. ಪ್ರತಿಯೊಂದು ಅಂಕೆಯೂ ವರ್ಣಮಾಲೆಯಲ್ಲಿನ ಅಕ್ಷರಗಳ ಸಂಖ್ಯೆಯನ್ನು ಸೂಚಿಸಿದರೆ, 532 ಇದರ ಅರ್ಥವು. 'ಉ ಇ ಆ' ಅಥವಾ ವ್ಯಂಜನಗಳನ್ನು ತೆಗೆದುಕೊಂಡರೆ ಙ—"

ಭೀಮ:—"ಛೆ! ಬಿಡು ಬಿಡು!! ಅದು ಸರಿಹೋಗುವದಿಲ್ಲವೆಂಬುದು ನನಗೆ ಮೊದಲೇ ಗೊತ್ತಿತ್ತು. ದೊಡ್ಡ ಅಂಕೆಯು ಪುಟಸಂಖ್ಯೆಯೇ ಸರಿ! ಆದರೆ ಅದರ ಮುಂದಿನ 'C' ಎಂಬ ಅಕ್ಷರದ ಸಂಜ್ಞೆಯೇನು?"

ಹರಿಣಿ:—C ಎನ್ನುವದು ಪುನಃ ಪುನಃ ಬರೆಯಲ್ಪಟ್ಟಿರುವದರಿಂದ ಅದರ ಅರ್ಥವು ಬಹುಶಃ Chapter [ಅಧ್ಯಾಯ] ಎಂದಿರಬೇಕು!"

ಭೀಮ:—"ಯೋಚಿಸಿ ನೋಡಿದರೆ, ಅದು ಅಷ್ಟು ಸಮಂಜಸವಾಗುವದಿಲ್ಲ. ಏಕೆನ್ನುವಿಯಾ? ಒಂದು ಪುಸ್ತಕದ ಪುಟವನ್ನು ಸೂಚಿಸಿದ ಅದೇ ಪುಟದಲ್ಲಿಯ ಅಧ್ಯಾಯದ ಸಂಖ್ಯೆಯನ್ನು ಯಾವ ದಡ್ಡನೂ ಬರೆಯುವದಿಲ್ಲ. ಒಂದು ವೇಳೆ ಇದು ಸರಿಯಿದ್ದರೆ, ಪತ್ರಕಾರನು ಒಂದು ಮತ್ತು ಎರಡು ಇವುಗಳ ಹೊರತು ಬೇರೆಯ ಅಧ್ಯಾಯವನ್ನೇ ತೆಗೆದುಕೊಳ್ಳಬಾರದು?"

ಹರಿಣಿ:—"ಹಾ! ಅದು ಹೀಗೆ: C ಎಂದರೆ (Column) ಕಾಲಮು!!!"

ಭೀಮ:—"ಸರಿ! ಸರಿ!! ಈಗ ಇಷ್ಟು ಸ್ಪಷ್ಟವಾಯಿತು. ಪುಸ್ತಕವು 800 ಪುಟಗಳಿಗಿಂತಲೂ ಹೆಚ್ಚು ದೊಡ್ಡದು; ಅದರಲ್ಲಿ ಎರಡು ಕಾಲಮ್ಗಳಿವೆ. ಕಾಲಮ್ಮಿನ ಮುಂದಿನ ಸಂಖ್ಯೆಯು ಬಹುಶಃ ಶಬ್ದಸಂಖ್ಯೆಯು. ಈ ಪತ್ರದ ಅಭಿಪ್ರಾಯವನ್ನು ಕಂಡು ಹಿಡಿಯಲು, ಇಬ್ಬರಲ್ಲಿಯೂ ಅಂತಹ ಪುಸ್ತಕವು ಇರಲೇಬೇಕು. ಪತ್ರವು ಯಾರಿಗೆ ಬಂದಿದೆಯೆಂಬುದಂತೂ ನನಗೆ ತಿಳಿದಿದೆ! ಬರೆದವರಾರು ಎನ್ನುವದೇ ಮುಖ್ಯ ಪ್ರಶ್ನೆ!!"

ಹರಿಣಿ:—ಇದಾರಿಗೆ ಬಂದಿದೆ? ಮತ್ತು ಬರೆದವರಾರು?"

ಭೀಮ: "ಬರೆದವರಾರೋ ಗೊತ್ತಿಲ್ಲ. ಅದನ್ನೇ ಶೀಘ್ರವಾಗಿ ಕಂಡು ಹಿಡಿದು ಮುಂದಿನ ಹೆಚ್ಚು ಜಾಣತನದ ಹಾಗೂ ವಿಚಿತ್ರತರವಾದ ಕೆಲಸಕ್ಕೆ ಕೈ ಹಾಕಬೇಕು Two heads are better than oue ಎನ್ನುವಂತೆ ನಿನ್ನ ಸಲಹೆಯನ್ನು ಕೇಳಿ ನೋಡಿದೆ. ಇಬ್ಬರ ಅಭಿಪ್ರಾಯವೂ ಒಂದೇ ಆದುದರಿಂದ ನಮ್ಮ ತರ್ಕವು ಸರಿಯೆಂದು ಮನವಂಕೆಯಾದಂತಾಯಿತು!"

# ೪ ಎಳೆಯೆಂತೂ ಸಿಕ್ಕಿತು! ಹಚ್ಚಡ ನುಂಗುವದು ಹೇಗೆ?

'Wait, watch, pray, plead and then poceed'

ಭೀಮಸಿಂಗನು ಹರಿಣಿಗೆ ಆ ಪುಸ್ತಕವು ಕನ್ನಡ ಶಬ್ದಕೋಶವೇ ಇರಬೇಕೆಂದೂ ಬಹುತರವಾಗಿ ಬೇರೆ ಪುಸ್ತಕಗಳು ಎರಡು ಕಾಲಂ (Column) ಗಳಲ್ಲಿ ಬರೆಯಲ್ಪಟ್ಟಿಲ್ಲವೆಂದೂ ವಿವರಿಸಿ ಹೇಳಲು, ಅವಳಿಗೆ ಹಿಡಿಸಲಾರದಷ್ಟು ಆನಂದವಾಯಿತು.

ಅನಂತರ ನಮ್ಮ ಪತ್ತೇದಾರನು ಪ್ರಸಿದ್ಧ ಪುಸ್ತಕ ವ್ಯಾಪಾರಿಯೊಬ್ಬನ ಬಳಿಗೆ ಹೋದನು. ನಮ್ಮ ಕಥಾನಕವು ನಡೆದ ಕಾಲದಲ್ಲಿ ಬೆಂಗಳೂರಿನಲ್ಲಿ ಒಂದೇ ಒಂದು ಪುಸ್ತಕದ ಅಂಗಡಿಯಿತ್ತು. ಆರು ವರ್ಷಗಳಿಂದಲೂ ಹನ್ನೆರಡು ಕನ್ನಡ ಕೋಶಗಳು ಖರ್ಚಾಗದೆ ಉಳಿದಿದ್ದವೆಂದೂ, ಈಗ ೫-೬ ತಿಂಗಳ ಹಿಂದೆ 'ಜಯಲಕ್ಷ್ಮೀ' ಬ್ಯಾಂಕಿನ ಮ್ಯಾನೇಜರರಾದ ಗುಂಡೇರಾಯರು ಒಂದು ಪುಸ್ತಕವನ್ನು ತೆಗೆದುಕೊಂಡರೆಂತಲೂ ತಿಳಿಯ ಬಂದಿತು.

ರಘುನಾಥರಾಯನ ಬಳಿಯಲ್ಲಿಯೂ ಇಂತಹದೊಂದು ಕೋಶವು ಇರಲೇ ಬೇಕೆಂದು ತರ್ಕಿಸಿ, ಭೀಮಸಿಂಗನು ಅವರ ಮನೆಗೆ ಹೋದನು. ಸರಳಸ್ವಭಾವದ ರಘುನಾಥರಾಯನು ಕನ್ನಡಕೋಶವನ್ನು ಬಹು ವಿನಯದಿಂದ ಭೀಮಸಿಂಗನಿಗೆ ಕೊಟ್ಟನು.

ಅನಂತರ ಭೀಮಸಿಂಗನ ಅಪ್ಪಣೆಯ ಮೇರೆಗೆ ಹರಿಣಿಯು ಚಂಚಲೆಯ ಮನೆಗೆ ಹೋದಳು. ಅವಳ ಬೇಡಿಕೆಯಂತೆ ಆ ಕನ್ನಡ ಕೋಶವನ್ನು ಚಂಚಲೆಯು ಕೊಡದಿರಲಿಲ್ಲ.

ಹರಿಣಿಯೂ, ಭೀಮಸಿಂಗನೂ ಪುಸ್ತಕಗಳೆರಡನ್ನೂ ಚನ್ನಾಗಿ ಹೋಲಿಸಿ ನೋಡಿದರು. ಎರಡೂ ಒಂದೇ ತರಹದ ಪುಸ್ತಕಗಳೆಂದು ಮನವರಿಕೆಯಾಯಿತು. ಅವುಗಳಲ್ಲಿ ಒಂದು ರಘುನಾಥರಾಯನೆಂದೂ, ಮತ್ತೊಂದು ಗುಂಡೇರಾಯನ ಮಗಳಾದ ಇಂದುಮತಿಯದೆಂದೂ ಸ್ಪಷ್ಟವಾಗಿ ತಿಳಿಯಿತು.

ಇನ್ನು ತಮ್ಮ ತರ್ಕದ ಸತ್ಯತೆಯನ್ನು ಕಂಡುಕೊಳ್ಳಲು ಪುಸ್ತಕದಲ್ಲಿಯ ಶಬ್ದಗಳನ್ನು ಹೋಲಿಸಲು, ಆ ವಿಚಿತ್ರ ಪತ್ರದ ಅಭಿಪ್ರಾಯವು ಹೀಗೆಂದು ತಿಳಿಯ ಬಂದಿತು.

"ನೀನು ಹೆದರಬೇಡ; ಅಪವಾದವಂತೂ ಬಂದಿದೆ. ಈಗ ೧೦೦ ರೂಪಾಯಿ ಕಳಿಸಿದ್ದೇನೆ. ಬೇರೆ ಕಡೆಗೆ ಹೋಗು."

"ಇದರಿಂದ ನೋಡಲು, ಮೊದಲು ನಾನು ತರ್ಕಿಸಿದ್ದಂತೆ ರಘುನಾಥ ರಾಯನು ಅಪರಾಧಿಯಲ್ಲ. ಪತ್ರದಲ್ಲಿ ಬರೆದಂತೆ ಇವನು ಎಲ್ಲಿಯಾದರೂ ತಲೆ ತಪ್ಪಿಸಿಕೊಂಡರೆ ಇವನ ಮೇಲೆ ಸಂಶಯವು ದೃಢವಾಗುವದರಿಂದ ಅವನೆಂದಿಗೂ ಎಲ್ಲಿಗೂ ಹೋಗನು. ಇಂತಹ ಸಲಹೆಯನ್ನು ಕೊಟ್ಟ ಆ ವ್ಯಕ್ತಿಯು ಬಹುಶಃ ಇವನನ್ನು ಪ್ರೀತಿಸುವ ಓರ್ವ ರಮಣಿಯಾಗಿರಬೇಕು. ಅವಳ ಹೆಸರು ಇಂದುಮತಿಯೆಂದು ಈ ಪುಸ್ತಕದಿಂದ ಸ್ಪಷ್ಟವಾಯಿತು."

ಹೀಗೆ ತರ್ಕಿಸಿ ಭೀಮಸಿಂಗನು ಇದ್ದಕ್ಕಿಂತೆಯೇ ಹೊರಗೆ ಹೊರಟು ಹೋದನು. ಅವನ ಸ್ವಭಾವವನ್ನರಿತ ಹರಿಣಿಗೆ ಅದು ಹೆಚ್ಚು ಆಶ್ಚರ್ಯವೆನಿಸಲಿಲ್ಲ.

ಭೀಮಸಿಂಗನು ಗುಂಡೇರಾಯನ ಮನೆಗೆ ಹೋದಾಗ ಮಧ್ಯಾಹ್ನ ೩ ಗಂಟೆಯಾಗಿರಬಹುದು. ಗುಂಡೇರಾಯನು ಬ್ಯಾಂಕಿನ ಕೆಲಸಕ್ಕಾಗಿ ಹೋಗಿದ್ದನು. ಚಂಚಲೆಯು ಬಂಧುಗಳ ಮನೆಗೆ ಹೋಗಿದ್ದಳು. ಇಂದುಮತಿಯು ದಾರದಿಂದ ಹೂಗಳನ್ನು ಹೆಣೆಯುತ್ತ ತಲ್ಲೀನಳಾಗಿ ಕುಳಿತಿದ್ದಳು.

ಗುಂಡೇರಾಯನಿಗೆ ರೂಪವತಿಯಾದ ಇವಳೊಬ್ಬಳೇ ಮಗಳೆಂಬದನ್ನು, ಅವಳನ್ನು ಚತುರನೂ ಸುಂದರನೂ ಆದ ರಘುನಾಥರಾಯನಿಗೆ ಕೊಡುವ ಯೋಚನೆಯಿದ್ದಿತೆಂದೂ, ಮುಂದೆ ರಘುನಾಥರಾಯನು ಮ್ಯಾನೇಜರನಾಗುವ ಸಂಭವವಿತ್ತೆಂದೂ ಭೀಮಸಿಂಗನು ಈ ಮೊದಲೇ ತಿಳಿದಿದ್ದನು.

ಭೀಮಸಿಂಗನು ದಿವಾಣಖಾನೆಯಲ್ಲಿ ಬಂದುದನ್ನು ಕಂಡು ಸ್ವಲ್ಪ ಗಾಬರಿಯಾಗಿ ಅರಳಿದ ಕಣ್ಣುಗಳಿಂದ ನೋಡುತ್ತ "ಗುಂಡೇರಾಯರು ಮನೆಯಲ್ಲಿಲ್ಲ" ಎಂದಳು.

ಭೀಮ:—"ಹಾಗಾದರೆ ಚಂಚಲಾಬಾಯಿಯವರೋ?"

ಇಂದು:—"ಅವರೂ ಮನೆಯಲ್ಲಿಲ್ಲವಲ್ಲ!!"

ಭೀಮ:—(ಒಂದು ಆರಾಮ ಕುರ್ಚಿಯ ಮೇಲೆ ಕುಳಿತು) ನಿಮ್ಮ ಆಳುಗಳು ಸಹ ಹೂದೋಟದ ಕಡೆಗೆ ಹೋಗಿರುವ ಹಾಗಿದೆ! ಅದು ಹಾಗಿರಲಿ! ಇಂದುಮತಿಬಾಯಿ, ನಿಮ್ಮೊಡನೆ ಒಂದೆರಡು ಮಾತನಾಡಬಹುದೇ?

ಇಂದು:—ಪರಪುರುಷರಾದ ನೀವು ಹೀಗೆ ಒಳಗೆ ಬರುವದು ಸಹ ಅನುಚಿತ!

ಭೀಮ:-ನೀವು ರಘುನಾಥರಾಯರನ್ನು ನಿಜವಾಗಿಯೂ ಪ್ರೀತಿಸುವಿರೋ?

ಇಂದುಮತಿಯು ಬಹು ಗಾಬರಿಯಾದಳು. ಭೀಮಸಿಂಗನು ತಾನು ಗುಟ್ಟನ್ನು ರಟ್ಟು ಮಾಡಿದ ಬಗೆಯನ್ನು ವಿವರಿಸಿದನು. ಇಂದುಮತಿಯು

ಮನೋಹರವಾದ ಮುಖವು ಕ್ಷಣಕ್ಷಣದಲ್ಲಿಯೂ ಬಣ್ಣ ಬಣ್ಣವಾಗುತ್ತಿತ್ತು. ಕಟ್ಟಕೊನೆಗೆ ಭೀಮಸಿಂಗನು,

"ಬಾಯಿೞ, ಇನ್ನಾದರೂ ನನ್ನ ಮನೋಭಿಪ್ರಾಯವು ತಿಳಿಯಿತೇ? ರಘುನಾಥರಾಯನು ನಿರಪರಾಧಿಯೆಂದು ಸಿದ್ಧಪಡಿಸಲು, ನಾನು ಕೆಲವು ಸಂಗತಿಗಳನ್ನು ನಿಮ್ಮಿಂದ ತಿಳಿದುಕೊಳ್ಳಬೇಕಾಗಿದೆ."

ಇಂದು:—"ಕೇಳಿದರೆ ತಿಳಿದುದನ್ನು ಹೇಳುವೆನು."

ಭೀಮ:—"ಹಾಗಾದರೆ ಕಳವಾದ ಹಿಂದಿನ ದಿನ ನಿಮ್ಮ ಮನೆಗೆ ಯಾರಾದರೂ ಬಂದಿದ್ದರೋ? ನಡೆದ ಕಳವಿನಲ್ಲಿ ಭಾಗ ತೆಗೆದುಕೊಳ್ಳಲು ಅವರಿಗೇನಾದರೂ ಆಸ್ಪದವಿತ್ತೋ?

ಇಂದು:—ಕಳವಾದ ದಿನದ ರಾತ್ರಿ ಕೃಷ್ಣರಾಯನೂ ರಘುನಾಥನೂ ಊಟಕ್ಕೆ ಬಂದಿದ್ದರು. ಕೃಷ್ಣರಾಯನು ಬಹು ಒಳ್ಳೆಯ ಮನುಷ್ಯನು. ನಮ್ಮ ಅಮ್ಮನಿಗೆ ಅವನನ್ನು ಕಂಡರೆ ಪಂಚಪ್ರಾಣ. ಅವನು ನಮ್ಮ ಬಂಧುವೂ ಅಹುದು. ಊಟ ಮಾಡುವಾಗ ನಮ್ಮ ತಾಯಿಯು ಕೇಳಿದಳು: "ರಘುನಾಥರಾಯರು ಈಚೆಗೆ ನಮ್ಮನ್ನು ಮರೆತ ಹಾಗಿದೆ." ಎಂದು. ಅದಕ್ಕೆ ರಘುನಾಥರಾಯರು "ಅದು ಹೇಗೆ ಸಾಧ್ಯ ತಾಯಿೞ? ನನ್ನ ತನುವೆಲ್ಲಿದ್ದರೂ ಮನವು ತಾಯಿಯವರ ಬಳಿಯಲ್ಲಿಯೇ! ಈ ದಿನ ನಮ್ಮ ಪೆಟ್ಟಿಗೆಗೂ ನಿಮ್ಮ ಹೆಸರನ್ನೇ ಇಟ್ಟಿದ್ದೇವೆ! ನೋಡಿಂ."

ಭೀಮಸಿಂಗ:—"ಅಮ್ಮಾ, ಹೋಗಲಿ ಬಿಡಿ! ಅದೆಲ್ಲಾ ನನಗೇಕೆ? ಇನ್ನು ಮುಖ್ಯವಾದ ಕೆಲಸಗಳಿಗಾಗಿ ನಾನು ಈಗಲೇ ಹೊರಡಬೇಕು. ಇದಕ್ಕೆ ಆ ನಿಮ್ಮ ಬಂಧುವಾದ ಕೃಷ್ಣರಾಯನೂ ಸಹಾಯ ಮಾಡಬಹುದು. ಇನ್ನೊಂದು ಮಾತು! ಅವರು ಯಾವ ರೀತಿಯಲ್ಲಿ ಬಂಧುವಾಗಬೇಕು?"

ಇಂದು:—ಇವರು ನಮ್ಮ ತಾಯಿಯ ಅಣ್ಣನ ಮಗನು. ಹೈದರಾಬಾದಿನಲ್ಲಿ ಇದ್ದ ಶ್ರೇಷ್ಠ ಚಿನಿವಾಲರಾದ ಚಕ್ರಪಾಣಿರಾಯರ ಮಗಳನ್ನು ಕೊಟ್ಟು ಇವರಿಗೆ ಲಗ್ನವಾಗಿದೆ!! ಪಾಪ! ಪ್ರಾಯದಲ್ಲಿಯೇ ಅವಳು ತೀರಿಕೊಂಡಳಂತೆ. ಮೊನ್ನೆಮೊನ್ನಿನ ವರೆಗೂ ಪತ್ರವ್ಯವಹಾರವೂ ನಡೆಯುತ್ತಿತ್ತು. ಚಕ್ರಪಾಣಿರಾಯರು ತೀರಿಕೊಂಡ ನಂತರ ಇವರೂ ಹೈದರಾಬಾದಿಗೆ ಹೋಗಿಲ್ಲ.

ಭೀಮ:—ಸರಿ-ಸರಿ!! ನಾನು ಬಂದುದನ್ನು ಮಾತ್ರ ಯಾರಿಗೂ ಹೇಳಬೇಡಿ. ನಿಮ್ಮ ಪ್ರಿಯರಾದ ರಘುನಾಥರು ತಪ್ಪಿತಸ್ಥರಲ್ಲ. ನಿಜವಾದ ಕಳ್ಳ

ನನ್ನ ಕಂಡು ಹಿಡಿಯುವ ಕಾರ್ಯದಲ್ಲಿ ಸ್ವಲ್ಪ ಸ್ವಲ್ಪ ಅನುಕೂಲ ಮಾಡಿ ಕೊಟ್ಟರೆ ಕೃತಜ್ಞನಾಗಿರುವೆನು.''

ಇಂದು:—ಆಗಲಿ, ರಾಯರೇ ಯಶಸ್ವಿಯಾಗಿರಿ.''

## ೫ ನಾರಿಯ ತಂತ್ರವು ನಾರಾಯಣನಿಗೂ ತಿಳಿಯದು!

"Trust not your daughter's mind by what you see them act''

ಭೀಮಸಿಂಗನಿಗೆ ಇಂದುಮತಿಯ ಸಂಭಾಷಣೆಯಿಂದ ಆ ವಿಚಿತ್ರ ತಿಜೂರಿಯ ಸಂಕೇತಶಬ್ದವು ಮೂರನೆಯವನಾದ ಕೃಷ್ಣರಾಯನಿಗೂ ತಿಳಿದಿತ್ತೆಂದು ಸ್ಪಷ್ಟವಾಯಿತು. ಹಾಗಾದರೆ ಅವನ ಮೋಸವೇನೂ ನಡೆದಿರಲಿಕ್ಕಿಲ್ಲವೇ? ಛೇ, ಹಾಗೆ ಭಾವಿಸಲು ಕಾರಣವಿಲ್ಲ. ಏಕೆಂದರೆ, ಅವನು ಅವರ ಬಂಧುವು. ಇದಲ್ಲದೆ ಇಂದುಮತಿಯೇ ಅವನ ಸುಗುಣಗಳನ್ನು ಹೊಗಳಿದ್ದಾಳೆ. ಇಂತಹ ಪರಿಸ್ಥಿತಿಯಲ್ಲಿ ಚಂಚಲಾಬಾಯಿಯ ತವರುಮನೆಗೆ ಹೋಗಿ ಕೃಷ್ಣರಾಯನ ಗುಣ ಕಥನಗಳನ್ನು ತಿಳಿಯುವದು ಭೀಮಸಿಂಗನಿಗೆ ಆವಶ್ಯವೆಂದು ತೋರಿತು.

ಅದರಂತೆ ಭೀಮಸಿಂಗನು ಶ್ರೀರಂಗಪಟ್ಟಣಕ್ಕೆ ಬಂದು ಚಂಚಲಾಬಾಯಿಯ ಆಪ್ತರನ್ನು ವಿಚಾರಿಸಲು ಅವಳಿಗೆ ಅಣ್ಣ-ತಮ್ಮಂದಿರಾರೂ ಇರಲೇ ಇಲ್ಲವೆಂದು ತಿಳಿಯಬಂದಿತು!!!

ಭೀಮಸಿಂಗನು ಬಹು ಭ್ರಾಂತನಾದನು! ಇದರಲ್ಲಿ ಏನೋ ಗುಟ್ಟು ಇರಲೇಬೇಕೆಂದು ತಿಳಿದನು. ಅಣ್ಣ-ತಮ್ಮಂದಿರಿಲ್ಲದ ಚಂಚಲೆಯು ಕೃಷ್ಣರಾಯನು ತನ್ನ ಅಣ್ಣನ ಮಗನೆಂದು ಹೇಳಿದುದು ಹೇಗೆ? ಒಂದುವೇಳೆ ಕೃಷ್ಣರಾಯನೇ ವೇಷಧಾರಿಯಾಗಿದ್ದರೆ, ಅವನು ತನ್ನ ಅಣ್ಣನ ಮಗನೆಂಬುವದನ್ನು ಚಂಚಲೆಯು ಹೇಗೆ ಒಪ್ಪಿಕೊಂಡಳು? ಇಬ್ಬರೂ ಪರಸ್ಪರ ಪ್ರೇಮಿಗಳೆಂದು ಬಗೆದರೆ, ಚಂಚಲೆಯು ತೀರಾ ಹಿರಿಯಳು!! ಈ ಕಾರಸ್ಥಾನವು ಬಹು ಗೂಢವಿರುವದರಿಂದ, ಅದರ ಕೂಲಂಕಷವನ್ನು ವಿಚಾರಿಸಲು ಕೃಷ್ಣರಾಯನನ್ನು ಹುಡುಕಿಕೊಂಡು ಭೀಮಸಿಂಗನು ಪುನಃ ಬೆಂಗಳೂರಿಗೇ ಬರಬೇಕಾಯಿತು.

ಭೀಮಸಿಂಗನು ಆ ದಿನ ರಾತ್ರಿಯೇ ಕೃಷ್ಣರಾಯನ ಮನೆಯ ಬಳಿ ಬಂದನು. ಆಗ ರಾತ್ರಿ ಸುಮಾರು ಹನ್ನೆರಡು ಗಂಟೆಯಾಗಿತ್ತು. ಕತ್ತಲೆಯ ರಾತ್ರಿಯನ್ನು ಯಾರೂ ಬಹುತರವಾಗಿ ಬಯಸದಿದ್ದರೂ ಮುಚ್ಚುಮರೆ ಕೆಲಸ ಮಾಡುವವರು ಅಭಿನಂದಿಸುತ್ತಾರೆ. ನಮ್ಮ ಭೀಮಸಿಂಗನೂ ಆ ಕಾಳರಾತ್ರಿಯನ್ನು ಅಭಿ

ನಂದಿಸಿದನು. ಏಕೆಂದರೆ ಭೀಕರವಾದ ಆ ರಾತ್ರಿಯಲ್ಲಿ ಕೃಷ್ಣರಾಯನ ಉಪ್ಪರಿಗೆಯಲ್ಲಿ ಒಂದು ದೀಪವು ಮಂದಮಂದವಾಗಿ ಉರಿಯುತ್ತಿತ್ತು. ಇದು ಇವನ ದಿನದ ಪದ್ಧತಿಯೋ ಅಥವಾ ಏನಾದರೂ ರಹಸ್ಯವಿದೆಯೋ ಎಂದು ವಿಚಾರಿಸುತ್ತ ಭೀಮಸಿಂಗನು ನಿಂತಿರಲು, ಯಾರೋ ಸೀಳು ಹೊಡೆದ ಸದ್ದಾಯಿತು. ಅವನು ಸ್ವಲ್ಪ ಅಪ್ರತಿಭನಾಗಿ ಸರಿದು ನಿಂತನು. ಮೇಲಿನ ಕಿಟಕಿಯು ಸಂಪೂರ್ಣವಾಗಿ ತೆರೆಯಲ್ಪಟ್ಟು, ಕೃಷ್ಣರಾಯನು ಹೊರಕ್ಕೆ ಬಗ್ಗಿ ನೋಡಿ ಮೂರು ಸಲ ಚುಟಿಕೆಗಳನ್ನು ಹೊಡೆದನು. ಪುನಃ ಕೆಳಗಿನಿಂದ ಮೂರು ಚುಟಿಕೆಗಳು ಪ್ರತ್ಯುತ್ತರವಾಗಿ ಶಬ್ದ ಮಾಡಲ್ಪಟ್ಟವು. ಮುಂದೆರಡು ನಿಮಿಷಗಳಲ್ಲಿ ಒಂದು ನೂಲೇಣಿಯು ಇಳಿಬಿದ್ದಿತು. ಚಪಲ ಚರಣೆಯಾದ ಓರ್ವ ಲಲನೆಯು ಲಗುಬಗೆಯಿಂದ ಅದನ್ನು ಹತ್ತಿ ಮೇಲಕ್ಕೆ ಹೋದಳು!! ಏಣಿಯೂ ಮೇಲಕ್ಕೆ ಹೋಯಿತು.

ಬೆರಗಿನ ಅರಳಿದ ಕಣ್ಣುಗಳಿಂದ ಭೀಮಸಿಂಗನು ಇದನ್ನೆಲ್ಲ ನೋಡಿದನು. ಸಮಯಕ್ಕೆ ಸರಿಯಾಗಿ ತನ್ನನ್ನು ಬರಮಾಡಿದ ದೈವಕ್ಕೆ ಬಹಳ ವಂದಿಸಿದನು. ಅನಂತರ ಮೆಲ್ಲನೆ ಎದುರಿನಲ್ಲಿದ್ದ ಒಂದು ಎತ್ತರವಾದ ಗಿಡವನ್ನೇರಿ (Telescope) ದೂರದರ್ಶಕಯಂತ್ರದ ಸಹಾಯದಿಂದ ಆ ಕೋಣೆಯಲ್ಲಿ ನಡೆಯುವದೆಲ್ಲವನ್ನೂ ನಿರೀಕ್ಷಿಸಲಾರಂಭಿಸಿದನು!

ಮಂದಪ್ರಕಾಶವುಳ್ಳ ಆ ಕೋಣೆಯಲ್ಲಿನ ಒಂದು ಮಂಚದ ಮೇಲೆ ಸುಮಾರು ೨೮ ವರ್ಷದ ಸುಂದರ ತರುಣನೊಬ್ಬನು ಮಲಗಿದ್ದನು. ಅವನ ತಲೆಯ ಬಳಿಯಲ್ಲಿ ಒಂದು ಆರಾಮ ಕುರ್ಚಿಯ ಮೇಲೆ ಅರ್ಧನಿಮೀಲಿತ ನೇತ್ರೆಯಾದ ಸ್ತ್ರೀಯಳೊಬ್ಬಳು ಮುಂದಕ್ಕೆ ಬಾಗಿ ಅದೇನೋ ವಿವರಿಸಿ ವಿವರಿಸಿ ಹೇಳುತ್ತಿದಳು. ಲಲನೆಯ ಮುಖದಲ್ಲಿ ಯಾಚನೆ, ದಯೆ, ಪ್ರೇಮ, ಆಕಾಂಕ್ಷೆ, ಆತುರತೆಗಳೂ, ತರುಣನ ಮುಖದಲ್ಲಿ ನಿಷ್ಠುರತೆ, ಕ್ರೌರ್ಯಗಳೂ ಬಹು ಸ್ಪಷ್ಟವಾಗಿ ಒಡಮೂಡಿದ್ದವು. ಸುಮಾರು ಅರ್ಧತಾಸಿನ ನಂತರ ತರುಣನು ಮೇಲಕ್ಕೆದ್ದು ಆ ಶಯನಾಗಾರಕ್ಕೆ ಬೀಗವನ್ನು ಹಾಕಿ, ಮಹಡಿಯಿಂದಿಳಿದು, ಚಿನಿವಾಲ ಗಟ್ಟಿಯ ಕಡೆಗೆ ಸಾಗಿದನು.

ಹೊಂಚುಹಾಕಿ ಕುಳಿತಿದ್ದ ಭೀಮಸಿಂಗನು ಬಹಳ ಎಚ್ಚರದಿಂದ ಕೃಷ್ಣರಾಯನನ್ನೇ ಹಿಂಬಾಲಿಸಿದನೆಂದು ನಮ್ಮ ಚತುರ ವಾಚಕರಿಗೆ ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಕಾರ್ಯಾತುರನಾದಾಕೃಷ್ಣರಾಯನು ತನ್ನ ಗೊತ್ತಿನ ಚಿನಿವಾಲನನ್ನೆಬ್ಬಿಸಿ, ಅದೇನೋ ಹೇಳಿದನು. ಮುಂದೆರಡು ನಿಮಿಷಗಳಲ್ಲಿ ಭೀಮ

ಸಿಂಗನು ನೋಡುತ್ತಿರುವಂತೆಯೇ ಚಿನಿವಾಲನು ಕೃಷ್ಣರಾಯನ ಉಡಿಯಲ್ಲಿ ಕೆಲವು ಚಿನ್ನದ ಒಡವೆಗಳನ್ನು ಹಾಕಿದನು. ಕೃಷ್ಣರಾಯನು ಹೊರಭಾಗದಲ್ಲಿ ಬಂದು ನಿಂತಿದ್ದ ಭೀಮಸಿಂಗನನ್ನು ಲಕ್ಷ್ಯಕ್ಕೆ ತಾರದೆ ಅವಸರದಿಂದ ಹೊರಟು ಹೋದನು. ಏಕೆಂದರೆ ಪತ್ತೆದಾರ ಶಿರೋಮಣಿಯಾದ ಭೀಮಸಿಂಗನ ಹೆಸರನ್ನು ಅವನು ಕೇಳಿದ್ದನೇ ವಿನಹ, ಅವನನ್ನು ಕೃಷ್ಣರಾಯನು ಈ ಮೊದಲು ನೋಡಿರಲಿಲ್ಲ!!

ರಮಣಿಯು ಆ ಕಾಳರಾತ್ರಿಯಲ್ಲಿ ಆ ಒಡವೆಗಳೊಡನೆ ಏಕಾಕಿನಿಯಾಗಿ ಮನೆಗೆ ಹೊರಟಳು. ಭೀಮಸಿಂಗನ, ಅವಳು ಗುಂಡೇರಾಯನ ಮನೆಯನ್ನು ಪ್ರವೇಶಿಸಿ, ಒಳಗಿನಿಂದ ಬಾಗಿಲನ್ನು ಭದ್ರಪಡಿಸುವವರೆಗೂ ಕಾದಿದ್ದನು.

ಅನಂತರ ಚಂಚಲೆಯ ಈ ಸಾಹಸಕ್ಕೆ ಬೆರಗಾಗಿ 'ಕುಸುಮ ಮಧ್ಯದಲ್ಲಿಯೂ ಪಾಷಾಣವಿರುವದೇ?' ಎಂದುಕೊಂಡು, ಭೀಮಸಿಂಗನು ಮನೆಯ ಕಡೆಗೆ ಸಾಗಿದನು.

## ೭ ಆಟಕ್ಕೆ ತಕ್ಕ ವೇಷ, ವೇಷಕ್ಕೆ ತಕ್ಕ ಭಾಷೆ.

"A jest's prosperity lies in the ears of those that hear it"

"ಚಂಚಲೆಯು ಮಧ್ಯರಾತ್ರಿಯಲ್ಲಿ ನಡೆಸಿದ ಸಾಹಸವನ್ನು ಯೋಚಿಸಲುಅದು ಅವಳ ಗಂಡನಿಗೆ ಗೊತ್ತಾಗದಂತೆ ಮಾಡಿದ ಕೆಲಸವಾಗಿರಬೇಕು. ಇದರಿಂದ ಕೃಷ್ಣರಾಯನೂ, ಚಂಚಲೆಯೂ ಪರಸ್ಪರ ಪ್ರೀತಿಸುತ್ತಿದ್ದರೆಂಬುವದು ಒಡೆದು ಕಾಣುತ್ತಿತ್ತು! ಇಲ್ಲದಿದ್ದರೆ ಬಂಧುವಲ್ಲದ ಇವನೊಡನೆ ಇಷ್ಟೇಕೆ ಸಲಿಗೆ? ಸರಿ!(Love is blind) ಪ್ರೀತಿಯು ಕುರುಡು ಎನ್ನುವದು ಸುಳ್ಳಲ್ಲ. ಆದುದರಿಂದಲೇ ಅವನು ಅಂತಹ ರಾತ್ರಿಯಲ್ಲಿಯೇ ಒಡವೆಗಳನ್ನು ತಂದು ಕೊಟ್ಟದು!! "ಒಡವೆಗಳು!! ಅವುಗಳನ್ನು ಕೃಷ್ಣರಾಯನು ಕೊಂಡು ತಂದನೇ? ಅಥವಾ ಚಂಚಲೆಯ ಆಭರಣಗಳನ್ನು ಮೊದಲು ಒತ್ತಿಯಿಟ್ಟು ಈಗ ಬಿಡಿಸಿಕೊಂಡು ಬಂದನೇ? ಇದರಿಂದ ನನ್ನ ಪತ್ತೆಯ ಕೆಲಸಕ್ಕೆ ಹೆಚ್ಚು ಪ್ರಯೋಜನವಿರುವಂತೆ ಕಾಣುವದಿಲ್ಲ. ಆದರೂ ತಿಳಿದು ನೋಡುವಾ. ಈ ಒಡವೆಗಳನ್ನು ರಾತ್ರಿಯಲ್ಲಿಯೇ ತಂದಿರುವದರಿಂದ, ಮರುದಿನವೇ ಏನಾದರೂ ವಿಶೇಷದ ದಿನವಾಗಿರಬೇಕು; ಪಂಚಾಂಗವು ಯಾವ ಹಬ್ಬವೂ ಇಲ್ಲವೆನ್ನುವದು! ಹಾಗಾದರೆ ಬೇರೆಡೆಯಲ್ಲಿ ಔತಣವಿರಬಹುದೇ? ಇದೀಗ ಸರಿ. ದಿವಾನ

ಬಹದ್ದೂರರ ಮನೆಯಲ್ಲಿ ಯಾವದೋ ಹುಟ್ಟಿದ ದಿನವೆಂದು ಸದ್ಗೃಸ್ಥರಿಗೆಲ್ಲ ಊಟಕ್ಕೆ ಹೇಳಿದ್ದಾರೆ.

"ಕೃಷ್ಣರಾಯನು ಹೊರಬಿದ್ದೊಡನೆಯೇ ನಾನು ಚಿನಿವಾಲನನ್ನು ವಿಚಾರಿಸ ಬಹುದಾಗಿತ್ತು. ಹಾಗೆ ಮಾಡಿದ್ದಲ್ಲಿ ಆ ಚಿನಿವಾಲನು ನಾನು ಬಂದ ವಿಷಯ ಮನ್ನು ಕೃಷ್ಣರಾಯನಿಗೆ ತಿಳಿಸುವ ಸಂಭವವಿತ್ತು. ಏಕೆಂದರೆ, ಪತ್ತೇದಾರ ನಾದ ನನ್ನ ಗುರುತು ಅವನಿಗಿರುವದರಿಂದ, ಒಂದಿಲ್ಲೊಂದು ಸಂಶಯದಿಂದ ಅವನು ಕೃಷ್ಣರಾಯನಿಗೆ ನಾನು ಬಂದ ವಿಷಯವನ್ನು ತಿಳಿಸಿಯೇ ತಿಳಿಸುತ್ತಿದ್ದನು.

"ಹಾಗಾದರೆ ಆ ಆಭರಣಗಳು ಹೊಸವೋ ಅಥವಾ ಹಳೆಯವೋ? ಒಂದು ವೇಳೆ ಹೊಸವಾಗಿದ್ದರೆ ಕೃಷ್ಣರಾಯನು ಅವುಗಳನ್ನು ಕೊಂಡು ತಂದಿರಬೇಕು. ಅಥವಾ ಹಳೆಯವಾಗಿದ್ದರೆ ಒತ್ತಿ (Mortgage)ಯಿಂದ ಬಿಡಿಸಿ ತಂದಿರಬೇಕು. ಆದುದರಿಂದ ಇದರ ಮರ್ಮವನ್ನು ಅರಿಯಲು ನಾನು ಬೇರೊಂದು ತಂತ್ರವನ್ನು ಹೂಡಬೇಕು."

ಈ ಪರಿಯ ಯೋಚನಾ ಮಾಲೆಯಲ್ಲಿ ಲೀನನಾಗಿದ್ದ ಭೀಮಸಿಂಗನನ್ನು ಹರಿಣಿಯು ಊಟಕ್ಕೆಂದು ಕರೆಯಲು, ಅವನು ಮಧ್ಯಾಹ್ನವು ಮೀರಿದುದನ್ನು ಅರಿತು ಬಹು ಚಕಿತನಾದನು.

ಇತ್ತ ದಿವಾನ ಬಹದ್ದೂರರ ಮನೆಯಲ್ಲಿ ಬಹಳ ಗಡಿಬಿಡಿಯು ನಡೆದಿತ್ತು. ಗುಂಡೇರಾಯನೂ ಚಂಚಲಾ-ಇಂದುಮತಿಯರೂ ಬಂದಿದ್ದರು. ಇತರ ಸಭ್ಯ ಗೃಹಸ್ಥರೂ, ಅನೇಕ ಮಹಿಳೆಯರೂ ಮನೆಯ ಮುಂದಿನ ಹೂದೋಟದಲ್ಲಿ ಗುಂಪುಗುಂಪಾಗಿ ತಿರುಗಾಡುತ್ತಿದ್ದರು.

ಇಂತಹ ವೇಳೆಯಲ್ಲಿ ಒಬ್ಬ ಜಾದೂಗಾರನು (Magician) ಅಲ್ಲಿಗೆ ಬಂದನು; ಅವನ ಮತ್ತು ಅವನ ಅನುಯಾಯಿಗಳ ದುಃಖವನ್ನು ದಿಟ್ಟಿಸಿ ನೋಡಿದರೆ ಬಹು ಚತುರ ಜನಗಳೆನ್ನುವದು ಒಡೆದು ಕಾಣುತ್ತಿತ್ತು. ಆಗ ದಿವಾನಬಹದ್ದೂರರೇ ಮುಂದೆ ಒಂದು ತಾಸು ವಿನೋದವನ್ನು ಮಾಡಿ ತೋರಿಸ ಹೇಳಿದರು. ಜಾಣನಾದ ಮುಖ್ಯಜಾದೂಗಾರನು ವಿನೋದಗಳ ಮಧ್ಯದಲ್ಲಿ ವಿಕಟವಾದವನ್ನು ಪ್ರಾರಂಭಿಸಿದನು. ಅವನ ಹುಚ್ಚು ಕಥೆ ಹಾಗೂ ವಿನೋದ ಗಳಿಗೆ ಎಲ್ಲರೂ ನಗುತ್ತಿದ್ದರು. ಮುಖ್ಯ ಜಾದೂಗಾರನು ತನ್ನ ತೀಕ್ಷ್ಣವಾದ ದೃಷ್ಟಿಯಿಂದ ಕೆಲವು ವ್ಯಕ್ತಿಗಳನ್ನು ಅಂಗಾಲಿನಿಂದ ನಡುನೆತ್ತಿಯ ವರೆಗೂ ದಿಟ್ಟಿಸಿ ದಿಟ್ಟಿಸಿ ನೋಡುತ್ತಿದ್ದನು. ಇವನು ಮಾತನಾಡುವದು ಬಹಳ

ಮರುಳಾಟವೆಂದು ಸಕಲರು ತಿಳಿದಿದ್ದರೂ, ಕೃಷ್ಣರಾಯನೂ ಚಂಚಲೆಯೂ ಬಹು ಗಾಬರಿಯಾದರು. ಇಂದುಮತಿಯು ಸಂಶಯಗ್ರಸ್ತಳಾಗಿ ತಾನು ಈ ಮೊದಲು ಕೇಳಿದ ಈ ಧ್ವನಿಯು ಯಾರದೆಂದು ಚಿಂತಾಕುಲಳಾದಳು. ಜಾದೂಗಾರನು ಒಂದಾನೊಂದು ವಿಷಯವನ್ನು ಒತ್ತಿಒತ್ತಿ ನುಡಿಯಲು, ಚಂಚಲೆಯು ಗಾಬರಿಯಿಂದ ಚಿಟ್ಟನೆ ಚೀರಿಬಿಟ್ಟಳು!! ಸಕಲರ ನೋಟವೂ ಅತ್ತ ಕಡೆಗೆ ತಿರುಗಲು, ನಮ್ಮ ಜಾದೂಗಾರನು ಗಂಟು-ಮೊಟ್ಟೆಗಳನ್ನು ಕಟ್ಟಿ ಹೊರಡಲನುವಾದನು.

ದಿವಾನ ಬಹದ್ದೂರರು ರೂಪಾಯಿಗಳನ್ನು ಬಹುಮಾನವಾಗಿ ಕೊಡಹೋಗಲು, ಅವನು ಕೈಮುಗಿದು ಹಾಗೆಯೇ ಹೊರಟುಹೋದನು.

## ರಹಸ್ಯ ಸ್ಫೋಟನ. I

## ೭ ಹಿಡಿದ ಕಾರ್ಯ ಸಾಧಿಸಲು ಹೆಣವಾದರೂ ಹೊರಬೇಕು.

ಭೀಮಸಿಂಗನಿಗೆ ಆ ಆಭರಣಗಳು ಅಡುವಿಟ್ಟವುಗಳೆಂದು ತಿಳಿದು ಬಂದರೂ, ಪತ್ತೆಯ ಕಾರ್ಯದಲ್ಲಿ ಮಹತ್ವದ ಲಾಭವಾದಂತೆ ಕಂಡು ಬರಲಿಲ್ಲ. ಯೋಚಿಸುತ್ತ ಹೋದಂತೆ ಅವನ ಸಂಶಯವು ಕೃಷ್ಣರಾಯನ ಮೇಲೆ ದೃಢವಾಗುತ್ತ ಬಂತು; ಆದರೂ ಪ್ರತ್ಯಕ್ಷವಾದರೂ ಪರಾಂಬರಿಸಿ ನೋಡಬೇಕೆಂಬ ನುಡಿಯಂತೆ ಕೃಷ್ಣರಾಯನ ನಿಜಸ್ಥಿತಿಯನ್ನು ಬೈಲು ಮಾಡಲು ಅವನು ಟೊಂಕವನ್ನು ಕಟ್ಟಿದನು. ಯಾವ ಕ್ಷಣದಲ್ಲಿ ಕೃಷ್ಣರಾಯನು ಚಂಚಲೆಯ ಅಣ್ಣನ ಮಗನಲ್ಲವೆಂದು ತಿಳಿಯ ಬಂದಿತೋ, ಯಾವ ಕ್ಷಣದಲ್ಲಿ ವಿಚಿತ್ರವಾದ ತಿಜೂರಿಯ ಸಂಕೇತವು ಇವನಿಗೂ ತಿಳಿದಿತ್ತೆಂದು ಭೀಮಸಿಂಗನು ಅರಿತನೋ ಆ ಕ್ಷಣದಿಂದ ಅವನು ಕೃಷ್ಣರಾಯನ ಮೇಲೆ ವಕ್ರದೃಷ್ಟಿಯನ್ನು ಚಲ್ಲಿದ್ದನು. ಈಗ ಇಂದುಮತಿಯು ಹೇಳಿದಂತೆ ಅವನು ಶ್ರೇಷ್ಠ ಚಿನಿವಾಲನಾದ ಚಕ್ರಪಾಣಿರಾಯನ ಅಳಿಯನಾದರೂ ಆಹುದೋ ಹೇಗೆಂದು ವಿಚಾರಿಸಲು ಭೀಮಸಿಂಗನು ಹೈದರಾಬಾದಿಗೆ ಬಂದನು.

ಬರುವಾಗ ಅವನು ಬೆಂಗಳೂರ ಸಿಟಿ ಮ್ಯಾಜಿಸ್ಟ್ರೇಟರ ಕಡೆಯಿಂದ ಕಾರ್ಯಾರ್ಥಿಯಾಗಿ ಬಂದಿರುವನೆಂದು ಪತ್ರವನ್ನು ತಂದಿದ್ದುದರಿಂದಲೂ, ಮಾತಿನಲ್ಲಿ ಬಹು ಸರಸ ಹೃದಯನಾಗಿದ್ದುದರಿಂದಲೂ ಚಕ್ರಪಾಣಿರಾಯನು ಅವನಿಗೆ ಯೋಗ್ಯ ಸನ್ಮಾನವನ್ನು ಮಾಡಿದನು.

ಮಾತಿನ ಸಂದರ್ಭವನ್ನು ನೋಡಿಕೊಂಡು ಚಕ್ರಪಾಣಿರಾಯರಿಗೆ ಹೆಣ್ಣು ಮಕ್ಕಳಾರೂ ಹುಟ್ಟಿಯೇ ಇಲ್ಲವೆಂದೂ, ತಾನೊಬ್ಬನೇ ಅವರ ಮಗನೆಂದೂ ತನ್ನ ಹೆಸರು ವಾಸುದೇವರಾಯನೆಂದೂ ಅವನು ಹೇಳಿಬಿಟ್ಟನು!

ಭೀಮಸಿಂಗನು ಈ ವಿಚಿತ್ರ ಪರಂಪರೆಗಳನ್ನು ನೋಡಿ ಬಹಳ ಭ್ರಾಂತನಾದನು. ಕಲ್ಲಿದ್ದಲಿನ ಗಣಿಯಲ್ಲಿ ಆಳವಾಗಿ ಅಗಿಯುತ್ತ ಹೋದಂತೆ, ಹೆಚ್ಚು ಹೆಚ್ಚಾಗಿ ಕಪ್ಪೇ ಕಂಡು ಬರುವಂತೆ ಇಲ್ಲಿನ ಸ್ಥಿತಿಯಾಯಿತೆಂದು ಬಗೆದನು.

ಮುಂದೆರಡು ದಿನಗಳಲ್ಲಿ ಮಾತಿನಲ್ಲಿ ಬಹು ಚತುರನಾದ ಭೀಮಸಿಂಗನು ಚಕ್ರಪಾಣಿರಾಯರ ಕಾಲದಿಂದಲೂ ಮನೆಯಲ್ಲಿ ನಂಬಿಗೆಯಿಂದಿದ್ದ ಒಬ್ಬ ಸೇವಕನ ಸ್ನೇಹವನ್ನು ಮಾಡಿದನು. ಸೇವಕನು ಭೀಮಸಿಂಗನ ಮಾತಿಗೂ ಅವನು ಕೊಡುವ ಬಹುಮಾನಗಳಿಗೂ ಬಲು ಮನಸೋತಿದ್ದನು. ಮುದುಕರಲ್ಲಿ ರೂಢಮೂಲವಾಗಿರುವ ತಮ್ಮ ಹಿಂದಿನ ಜೀವನದ ಸಂಗತಿಗಳನ್ನು ಬಹು ಸ್ವಾರಸ್ಯವಾಗಿ ಚಿತ್ರಿಸುವ ಕೌಶಲ್ಯವು ಈ ಮುದುಕನಲ್ಲಿಯೂ ಇತ್ತು. ನಮ್ಮ ಪತ್ತೇದಾರನು ಅದರ ಮಹತ್ವದ ಉಪಯೋಗವನ್ನು ತೆಗೆದುಕೊಳ್ಳದಿರಲಿಲ್ಲ.

ಆ ಮುದುಕನ ದಿನದಿನಗಳ ಮಾತಿನಿಂದ ಭೀಮಸಿಂಗನು ಇಷ್ಟು ಮಾತ್ರ ತಿಳಿದುಕೊಂಡನು:—

"ಚಕ್ರಪಾಣಿರಾಯನ ಮೊದಲಿನ ಹೆಸರು ಸರ್ವೋತ್ತಮರಾಯನೆಂದು. ಅವನು ಪ್ರಾಯದಲ್ಲಿ ಬಹು ಕಾಮಾಂಧನಾಗಿದ್ದನು. ಮುಂದೆ ಪ್ರಾಯದಲ್ಲಿಯೇ ತನ್ನ ತಂದೆಯ ವಿಶಿಷ್ಟ ಸಂಪತ್ತಿಗೆ ತಾನೇ ಅಧಿಕಾರಿಯಾದನು. ಆಗ ಅವನ ಮನೆಯಲ್ಲಿ ಪೂಜಾರಿಯೊಬ್ಬನಿದ್ದನು. ಅವನ ಮಗಳು ಅತ್ಯಂತ ಸುಂದರಿಯು. ಅವಳ ಹೆಸರು ಕಮಲಾ. ಉಪಾಯಾಂತರದಿಂದ ಇವನು ಆ ತರುಣಿಯನ್ನು ಕೆಡಿಸಿದನು. ಕೆಡಕಿನ ಕಿರೀಟವಿದೆಂಬಂತೆ ಅವಳು ಗರ್ಭಿಣಿಯಾದಳು. ಇದು ಜನಸಮಾಜಕ್ಕೆ ತಿಳಿಯಬಾರದೆಂದು ಪೂಜಾರಿಯೂ, ಅವನ ಹೆಂಡತಿಯೂ ಕಮಲೆಯನ್ನು ಬೆಂಗಳೂರಿನ ಹೆರಿಗೆಯ ಆಸ್ಪತ್ರೆ (Maternity Hospital) ಗೆ ಸಾಗಿಸಿದರು. ಹುಟ್ಟಿದ ಸುಲಕ್ಷಣವಾದ ಗಂಡುಮಗುವನ್ನು ಸೂಲಗಿತ್ತಿಗೇ ಸಾಕಿಕೊಳ್ಳೆಂದು ಕೊಟ್ಟರು. ಸರ್ವೋತ್ತಮರಾಯರು ಅವಳಿಗೆ ೫೦೦ ರೂ. ಗಳನ್ನು ಕೊಟ್ಟರು. ಇದೆಲ್ಲ ಈ ಸೇವಕನ ಸಮಕ್ಷಮದಲ್ಲೇ ನಡೆದುದು."

"ಮುಂದೆ ಒಂದೆರಡು ವರ್ಷಗಳಲ್ಲಿ ಕಮಲೆಯನ್ನು ಬಹಳ ವರದಕ್ಷಿಣೆಯೊಡನೆ ಜಯಲಕ್ಷ್ಮಿ ಬ್ಯಾಂಕಿನ ಮ್ಯಾನೇಜರರಾದ ಗುಂಡೇರಾಯರಿಗೆ ಕೊಟ್ಟು

ಲಗ್ನ ಮಾಡಿದರು. ಪ್ರೌಢವಿವಾಹದಲ್ಲಿ ಬಹಳ ಶ್ರದ್ಧೆಯುಳ್ಳ ಅವರು ಹೆಚ್ಚೇನೂ ಚರ್ಚಿಸಲಿಲ್ಲ. ಕಮಲೆಯು ಗಂಡನ ಮನೆಯ ಹೆಸರು ಚಂಚಲಾ.

ಮುಂದೆ ಕೆಲವು ದಿನ ಕಳೆಯಿತು. ಸರ್ವೋತ್ತಮರಾಯರು ಮೊದಲೇ ಮದಾಂಧರು; ಮೇಲೆ ಮದ್ಯವನ್ನು ಕುಡಿಯುವ ದಿವ್ಯಪದ್ಧತಿಯಿತ್ತು. ಒಂದು ಸಲ ಸೇವಕನೊಬ್ಬನನ್ನು ಎಚ್ಚರದಪ್ಪಿ ಹೊಡೆಯಲಾರಂಭಿಸಲು ಅವನು ಸತ್ತು ಹೋದನು. ಆಗ ಅವರು ತಲೆ ತಪ್ಪಿಸಿಕೊಂಡು ಹೈದರಾಬಾದಿಗೆ ಬಂದರು. ಸರಕಾರಕ್ಕೆ ಗೊತ್ತಾಗದಾರದೆಂದು ಚಕ್ರಪಾಣಿರಾಯರೆಂದು ಪುನಃ ನಾಮಕರಣ ಮಾಡಿಕೊಂಡರು! ಅವರಿಗೆ ಹೆಣ್ಣು ಮಕ್ಕಳಾರೂ ಹುಟ್ಟಿಯೇ ಇರಲಿಲ್ಲ!!

ಭೀಮಸಿಂಗನು ಆ ಸೂಲಗಿತ್ತಿಯ ಹೆಸರೇನೆಂದು ವಿಚಾರಿಸಲು ಯಮುನೆ ಎಂದು ತಿಳಿಯಿತು.

ಅನಂತರ ಭೀಮಸಿಂಗನು ಪುನಃ ಬೆಂಗಳೂರಿನಲ್ಲಿಯೇ ಪತ್ತೆಯ ಕೆಲಸ ವನ್ನು ಸಾಗಿಸಬೇಕಾಯಿತು. ಆದುದರಿಂದ ಅವನು ಹೈದರಾಬಾದನ್ನು ಬಿಟ್ಟನು. ಬೆಂಗಳೂರಿನ ಹೆರಿಗೆಯ ಆಸ್ಪತ್ರೆಯಲ್ಲಿ ವಿಚಾರಿಸಲು, 'ಯಮುನೆ' ಎಂಬ ಸೂಲಗಿತ್ತಿಯು ಸಿಕ್ಕಳು. ಅವಳನ್ನು ಗುಪ್ತವಾಗಿ ವಿಚಾರಿಸಿದ್ದರಲ್ಲಿ ಚಂಚ ಲೆಯು ಮಗುವನ್ನು ಕೊಟ್ಟು ಬಿಟ್ಟುದೂ, ಸರ್ವೋತ್ತಮ(ಚಕ್ರಪಾಣಿ)ರಾಯರು ೫೦೦ ರೂ. ಬಹುಮಾನ ಕೊಟ್ಟುದೂ ನಿಜವೆಂದು ತಿಳಿಯಬಂದಿತು; ಆದರೆ ಚಂಚಲೆಯ ಮಗುವು ಒಂದು ವರ್ಷ ತುಂಬುವುದರೊಳಗಾಗಿ ಸತ್ತು ಹೋಯಿ ತೆಂದು ಯಮುನೆಯು ದುಃಖದಿಂದ ಹೇಳಿದಳು. ಹಾಗಾದರೆ, ಇನ್ನು ಮುಂದೆ ಭೀಮಸಿಂಗನು ಏನು ಮಾಡಬೇಕು? ಇಷ್ಟೆಲ್ಲ ಪ್ರಯತ್ನಗಳ ಫಲವೇನು? ಅಂತೂ ಚಂಚಲೆಗೆ ಬಂಧುವಲ್ಲದ ಈ ಕೃಷ್ಣರಾಯನು ಅದಾವ ಮೋಸಗಾರ ನಾಗಿರಬೇಕು? ಇಂತಹ ಯೋಚನೆಗಳಿಂದಭೀಮಸಿಂಗನು ಬಹು ಹಣ್ಣಾದನು! ಏನೇನು ಮಾಡಿದರೂ ಅವನ ಪತ್ತೆಯ ಕಾರ್ಯದಲ್ಲಿ ಸ್ಪಷ್ಟವಾದ ಮಾರ್ಗವು ಸಿಕ್ಕಲೇ ಇಲ್ಲ.

## ಆ ರಹಸ್ಯ ಸ್ಫೋಟನ II

Take warning hence ye, damsels fair,
Of men's insidious arts beware.

ಈ ದಿನ ಗುಂಡೇರಾಯನು ಊರಲ್ಲಿಲ್ಲ. ಇಂದುಮತಿಯು ಮನೆಯಲ್ಲಿಲ್ಲ. ಚಂಚಲೆಯ ತಾಯಿಯು ಮಗಳ ಮನೆಯಲ್ಲಿಯೇ ಬಂದಿದ್ದಾಳೆ. ಮಧ್ಯಾಹ್ನ

ಮೂರು ಗಂಟೆಯಾಗಿರಬಹುದು. ಆಳು ಮಹಡಿಯ ಮೇಲೆ ಹತ್ತಿ ಬಂದು "ಅಮ್ಮಾ, ಅದಾರೋ ತಮ್ಮನ್ನು ನೋಡ ಬಂದಿದ್ದಾರೆ" ಎಂದನು.

ಅಷ್ಟರಲ್ಲಿ ಇಂತಹ ಸಂಧಿಯನ್ನು ಹೊಂಚು ಹಾಕಿದ್ದ ಭೀಮಸಿಂಗನು ಮೇಲಕ್ಕೆ ಬಂದೇ ಬಿಟ್ಟನು! ತಾಯಿ-ಮಕ್ಕಳು ಭಯಭ್ರಾಂತರಾದರು. ಭೀಮ ಸಿಂಗನು "ಅಮ್ಮಾ, ನೀವಾರೂ ಭಯಪಡುವ ಕಾರಣವಿಲ್ಲ. ನಿಮ್ಮ ಹಿತದ ಸಲುವಾಗಿ ಕೆಲವು ಮಹತ್ವದ ಮಾತುಗಳನ್ನು ಕೇಳಲು ನಾನಿಲ್ಲಿಗೆ ಬರಲೇ ಬೇಕಾಯಿತು. ಇಲ್ಲದಿದ್ದರೆ ಗುಂಡೇರಾಯರಿಗೆ ಇಲ್ಲದ ಆರೋಪವು ಬರುವಂತಿದೆ" ಎಂದನು.

ತಾಯಿ-ಮಕ್ಕಳು ಬಹು ಉತ್ಕಂಠಿತರಾದರು. ಭೀಮಸಿಂಗನ ಸನ್ನೆಯಂತೆ ಸೇವಕನು ಹೊರಟು ಹೋದನು.

ಕೃಷ್ಣರಾಯನು ಚಕ್ರಪಾಣಿರಾಯರ ಅಳಿಯನೇ ಆಗಲಿ ಅಥವಾ ಚಂಚಲೆಯ ಅಣ್ಣನ ಮಗನೇ ಆಗಲಿ ಅಲ್ಲವೆಂಬ ವಿಷಯವನ್ನು ತಾನು ಕಂಡು ಹಿಡಿದ ಮಾರ್ಗವನ್ನೂ, ಹೈದರಾಬಾದಿನಲ್ಲಿ ತಾನು ಅರಿತ ವಿಷಯಗಳನ್ನೂ ಭೀಮಸಿಂಗನು ವಿವರಿಸಲು, ತಾಯಿ-ಮಕ್ಕಳು ಅರಳಿದ ಕಣ್ಣುಗಳಿಂದ ಆಶ್ಚರ್ಯಭರಿತರಾಗಿ ಕೇಳುತ್ತಿದ್ದರು.

ಕೃಷ್ಣರಾಯನು ಯಾರೆಂಬ ವಿಷಯವನ್ನು ಇದ್ದಕಿದ್ದಂತೆ ಹೇಳಿದರೆ, ಗುಂಡೇರಾಯನ ಮೇಲೆ ಬರಬಹುದಾದ ವಿಪತ್ತು ತಪ್ಪುವದೆಂದು ಭೀಮಸಿಂಗನು ಹೇಳಲು, ಚಂಚಲೆಯು ಮಾತನಾಡಲಾರಂಭಿಸಿದಳು:—

"ಜ್ಞಾನಿಗಳೇ, ನಿಜಸ್ಥಿತಿಯನ್ನು ಹೇಳುವ ಮನಸ್ಸು ನನಗಿಲ್ಲ; ಆದರೂ ನಮ್ಮ ಗುಂಡೇರಾಯನ ಹಿತಕ್ಕಾಗಿ ನಿರ್ವಾಹವಿಲ್ಲದೆ ಇದ್ದುದನ್ನು ಹೇಳಲೇ ಬೇಕಾಗಿದೆ. ಮುಂದೆ ನಾನು ಹೇಳುವ ಮತ್ತು ಈ ಮೊದಲು ತಮಗೆ ತಿಳಿದಿರುವ ವಿಚಿತ್ರವಿಷಯಗಳನ್ನು ನನ್ನ ಪತಿಗೆ ನೀವು ತಿಳಿಸುವುದಿಲ್ಲವೆಂದು ದೃಢವಾಗಿ ನಂಬಿರುತ್ತೇನೆ. ರಾಯರೇ, ನಿಮಗೆ ಹೇಗಿದ್ದರೂ ನನ್ನ ಹಾಗೂ ಚಕ್ರಪಾಣಿರಾಯರ ಪ್ರೇಮಕಥನವು ತಿಳಿದಿದೆ. ಇದರ ಫಲವಾಗಿ ಒಂದು ಮಗುವು ಇಲ್ಲಿಯ ಹೆರಿಗೆಯ ಆಸ್ಪತ್ರೆಯಲ್ಲಿ ಹುಟ್ಟಿದ ಸಂಗತಿಯೂ, ಅದನ್ನು ಸೂಲಗಿತ್ತಿಗೆ ಸಾಕಿಕೊಳ್ಳೆಂದು ಕೊಟ್ಟ ವಿಷಯವೂ ತಿಳಿದಿದೆ. ಮುಂದೆ ಗುಂಡೇರಾಯರು ನನ್ನನ್ನು ಮೋಹಿಸಿ ಲಗ್ನವಾದರು. ಈಗೆರಡು ವರ್ಷಗಳ ಹಿಂದೆ ಈ ಕೃಷ್ಣರಾಯನು

ನನ್ನ ಯಜಮಾನರಿಲ್ಲದ ವೇಳೆಯಲ್ಲಿ ಬಂದು ನನ್ನನ್ನು ಕಂಡನು. ಅವನ ಹೀನ ಸ್ಥಿತಿಯನ್ನು ನೋಡಿ ನನಗೆ ಮರುಕವಾಯಿತು, ಅವನ ವೆಚ್ಚಕ್ಕಾಗಿ ನನ್ನಲ್ಲಿದ್ದ ಧನವನ್ನು ಕೊಡಲಾರಂಭಿಸಿದೆ. ಮುಂದೆ ಅವನು ೧೦೦-೧೨೦ ಹೀಗೆ ದುಡ್ಡನ್ನು ಬೇಡಲಾರಂಭಿಸಿದನು.''

ಭೀಮು:—''ಓಹೋ! ಹೀಗೋ? ಅದಕ್ಕಾಗಿ ನೀವು ಒತ್ತಿಯಿಡಲು (Mortgage) ನಿಮ್ಮ ಒಡವೆಗಳನ್ನು ಕೊಡುತ್ತಿದ್ದಿರೋ? ಆ ರಾತ್ರಿ ಅವನು ಬಿಡಿಸಿಕೊಂಡು ಬಂದ ವಿಷಯವನ್ನು ನಾನು ಬಲ್ಲೆ.''

ಚಂಚಲಾ (ಆಶ್ಚರ್ಯದಿಂದ):— 'ಚಾಣಾಕ್ಷರಾದ ನಿಮಗೆ ಹೇಳತಕ್ಕ ವಿಷಯವಾವುದೂ ಬಹುಶಃ ನನ್ನಲ್ಲಿರಲಿಕ್ಕಿಲ್ಲ! ಆದರೂ ಹೇಳುತ್ತೇನೆ: ನಾನು ಅವನ ಇಚ್ಛೆಯಂತೆ ನಡೆಯದಿದ್ದರೆ ಎಲ್ಲವನ್ನೂ ಹೇಳಿಬಿಡುತ್ತೇನೆಂದು ಹೆದರಿಸಿದ.'

ಭೀಮು:—''ಎಲ್ಲವನ್ನೂ ಎಂದರೆ?''

ಚಂಚಲಾ:—''ನನ್ನ ವಿಷಯದಲ್ಲಿ ನಿಮಗೆ ತಿಳಿದಿರುವ ಎಲ್ಲ ವಿಷಯವನ್ನೂ ಅವನು ಕಂಡು ಹಿಡಿದಿದ್ದನು. ಅವನು ನನ್ನ ಮಗನೆಂಬ ವಿಷಯವು ನನ್ನ ಯಜಮಾನರಿಗೆ ತಿಳಿದರೆ ಅನರ್ಥವಾಗುತ್ತಿತ್ತು!''

ಭೀಮು (ನಸುನಕ್ಕು): —'ಹೀಗೆಲ್ಲ ಹೆದರಿಸಿದನೋ ಹಾಗಾದರೆ? ನಿಜ ಸ್ಥಿತಿಯನ್ನು ಹೇಳಬೇಕೆಂದರೆ ಅವನೇನೂ ನಿಮ್ಮ ಮಗನಲ್ಲ!''

ತಾಯಿ-ಮಕ್ಕಳಿಬ್ಬರೂ ಹೌಹಾರಿ ಕೇಳಿದರು: ''ಇದೇನು ಸ್ವಾಮಿ, ಹೀಗೆ ಹೇಳುತ್ತೀರಿ!! ಹಾಗಾದರೆ ಅವನಾರು?''

ಭೀಮು:— ''ಸರಿ! ಬಹಳ ಚನ್ನಾಯಿತು!! ಇಷ್ಟು ದಿನಗಳಿಂದಲೂ ದುಡ್ಡು ಕೊಟ್ಟು ಸಹಾಯ ಮಾಡಿದ ನಿಮಗೇ ಗೊತ್ತಿಲ್ಲವೆ?''

ಇಬ್ಬರೂ:—''ಮೋಸವಾಯಿತು! ಅವನಾರು? ಸ್ವಾಮಿ, ಆ ಕೃಷ್ಣ ರಾಯನಾರು?''

ಭೀಮು:—''ಆ ವಿಷಯವನ್ನೇ ತಿಳಿದುಕೊಳ್ಳಲು ನಾನಿಲ್ಲಿಗೆ ಬಂದುದು. ನಾನು ಹೊತ್ತುಗಳೆದುದೆಲ್ಲ ವ್ಯರ್ಥವಾದಂತಿದೆ!''

ಚಂಚಲಾ:—''ನಿಜವಾಗಿಯೂ ಅವನು ನನ್ನ........ಅಲ್ಲವೇ! ವೇಷಧಾರಿ ಯಾದ ಮೋಸಗಾರನೇ?''

ಭೀಮು: — ''ತಾಯಿ, ನನಗೇನೂ ತಿಳಿಯದು. ನೀವೇ ಯೋಚಿಸ ಬಹುದು'' ಎಂದು ಹೇಳಿ, ಸೂಲಗಿತ್ತಿಯ ಕೈಫಿಯತ್ತನ್ನು ಓದಿ ಹೇಳಿ, ಚಂಚಲ

ಲೆಯ ಮಗುವು ಬಹಳ ದಿನಗಳ ಹಿಂದೆಯೇ ಸತ್ತು ಹೋದ ವಿಷಯವನ್ನು ಅವರ ಮನವರಿಕೆಯಾಗುವಂತೆ ಮಾಡಿದನು.

ಹೆಂಗಳೆಯರಿಬ್ಬರೂ ಭ್ರಾಂತರಾಗಿ ಕೇಳುತ್ತಿದ್ದರು. ಹೆಚ್ಚು ಮಾತ ನಾಡಲು ಭೀಮಸಿಂಗನಿಗೆ ಹೆಚ್ಚು ವೇಳೆಯಿರಲಿಲ್ಲ. ಬ್ಯಾಂಕಿನ ಕಳವಿನ ವಿಷಯ ದಲ್ಲಿ ಕೃಷ್ಣರಾಯನ ಸಂಬಂಧವಿತ್ತೇ ಹೇಗೆಂದು ಅವನು ವಿಚಾರಿಸಲು, ಚಂಚ ಲೆಯು ಹೀಗೆ ಹೇಳಿದಳು:

“ಕಳವಾದ ದಿನದ ರಾತ್ರಿ ಕೃಷ್ಣರಾಯನು ಊಟಕ್ಕೆ ಬಂದಿದ್ದನು.”

ಭೀಮ:—“ಸರಿ! ಬಿಡಿ-ಬಿಡಿ!! ನಿಮ್ಮ ಹೆಸರನ್ನು ತಿಜೂರಿಗಿಟ್ಟ ವಿಷ ಯವು ಅವನಿಗೆ ತಿಳಿದು ಹೋಯಿತು! ಅಲ್ಲವೆ? ಮುಂದೆ?

ಪುನಃ ತಾಯಿ-ಮಕ್ಕಳಿಬ್ಬರೂ ಬೆರಗಾದರು. ಚಂಚಲೆಯು ಸಾವರಿಸಿ ಕೊಂಡು ಹೇಳಲಾರಂಭಿಸಿದಳು:

“—ಸರಿ! ರಾತ್ರಿ ನನ್ನನ್ನು ಕಾಡಿಬಿಟ್ಟನು. ಕೀಲಿ ಕೈಯನ್ನು(Key) ಗುಟ್ಟಾಗಿ ತಂದು ಕೊಡದಿದ್ದರೆ, ಯಜಮಾನರ ಮುಂದೆ ನನ್ನ ವಿಷಯವನ್ನೆಲ್ಲ ಹೇಳುವುದಾಗಿಯೂ, ತಂದು ಕೊಟ್ಟರೆ ಪುನಃ ಎಂದೆಂದೂ ನನ್ನ ಬಳಿಯಲ್ಲಿ ದುಡ್ಡಿಗಾಗಿ ಬರುವುದೇ ಇಲ್ಲವೆಂದೂ ಹೇಳಿದನು. ನಾನು ಬೇಡಿಕೊಂಡೆ, ಕಾಲಿಗೆ ಬಿದ್ದೆ; ದೇವರಲ್ಲಿ ಮೊರೆಯಿಟ್ಟೆ—”

ಭೀಮ:— “ಸರಿ-ಸರಿ! ಕೊನೆಗೆ ಗುಂಡೇರಾಯರಿಗೆ ತಿಳಿಯದಂತೆ ಬೀಗದ ಕೈಯನ್ನು ತಂದುಕೊಟ್ಟಿರಿ. ಅಲ್ಲವೆ?”

ಚಂಚಲಾ(ಆರಕ್ತಮುಖಿಳಾಗಿ):—“ಅಹುದು! ಅವನು ಬೀಗವನ್ನು ತೆರೆಯುವಾಗ ನನಗೆ ಬಹಳ ಸಂಕಟವಾಯಿತು. ಪತಿದೇವರಿಗೆ ಮೋಸಮಾಡುವ ಸತಿಯೆಂಥವಳೆಂದುಕೊಂಡೆ. ರೇಗಿದ ಹೆಬ್ಬುಲಿಯಂತೆ ಹಾರಿ, ಬೀಗದಿಂದ ಕೈ ಯನ್ನು ಕಿತ್ತುಕೊಂಡೆ. ಅವನು: ‘ಬಹಳ ಜೋಕೆ! ನೀನು ಸಂಸಾರಗೇಡಿಯೂ ಮಾನಹೀನಳೂ ಆಗುವೆ!’ಎಂದನು. ನಾನು ಬೆದರಿದೆ. ಕ್ಷಮಿಸೆಂದು ಕಾಲಿಗೆ ಬಿದ್ದೆ. ಅವನು ನಿರ್ಭಯನಾಗಿ ೫೦೦೦೦ ರೂ. ಗಳ ನೋಟುಗಳನ್ನು ತಕ್ಕೊಂಡು ಹೋದನು. ಮುಂದಿನ ಸಂಗತಿಗಳು ನಿಮಗಂತೂ ತಿಳಿದೇ ಇವೆ.” ಎಂದಳು.

ಭೀಮಸಿಂಗನು ಇನ್ನು ಕಾಲಹರಣ ಮಾಡುವುದು ಅನವಶ್ಯವೆಂದು ತಿಳಿದು, ಆ ಹೆಂಗಳೆಯರಿಗೆ ಹೆದರಕೂಡದೆಂದು ನಂಬಿಗೆಯನ್ನು ಕೊಟ್ಟು, ತಾನು ಮನೆಯ ಕಡೆಗೆ ಹೊರಟನು.

# ೮ ಮಾಡಿದ ಪಾಪಕ್ಕೆ ಮನವೇ ಸಾಕ್ಷಿ.

Early or late we stoop to fate.

ಭೀಮಸಿಂಗನು ಪೋಲೀಸ್ ಇನ್ಸಪೆಕ್ಟರರಿಗೆ ಕಳವಿನ ಪತ್ತೆಯಾಯಿತೆಂದು ಹೇಳಿ ಕಳುಹಿಸಿದನು. ಅವರಿಗೆ ಆಶ್ಚರ್ಯವಾಯಿತು. ಏಕೆಂದರೆ ಅವರಿನ್ನೂ ರಘುನಾಥರಾಯನೇ ತಪ್ಪಿತಸ್ಥನೆಂದು ಮನವರಿಕೆ ಮಾಡಿಕೊಂಡಿದ್ದರು. ಕ್ಷಣದಲ್ಲಿ ಇಬ್ಬರೂ ಸೇರಿ, ಕೃಷ್ಣರಾಯನ ಮನೆಗೆ ಬಂದರು ೪-೬ ಜನ ಪೋಲೀಸರು ಅವರನ್ನು ಹಿಂಬಾಲಿಸಿದರೆಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ.

ಕೃಷ್ಣರಾಯನು ಚಂಚಲೆಗೆ ರೂಪಾಯಿಗಳನ್ನು ಕಳಿಸಿಕೊಡಬೇಕೆಂದೂ, ಇಲ್ಲದಿದ್ದರೆ, ತಾನು ಅವಳ ಮಗನೆಂಬ ವಿಚಿತ್ರವಿಷಯವನ್ನು ಗುಂಡೇರಾಯನಿಗೆ ತಿಳಿಸಬೇಕಾಗುವದೆಂದೂ ಬಂದೆರಡು ಸಲ ಬರೆದ ಪತ್ರವನ್ನು ಭೀಮಸಿಂಗನು ಜೊತೆಯಲ್ಲಿ ಸಂಗ್ರಹಿಸಿ ತಂದಿದ್ದನು.

ದಿವಾಣಖಾನೆಯಲ್ಲಿ ಒಂದು ಆರಾಮಕುರ್ಚಿ(Easychair)ಯಲ್ಲಿ ಒರಗಿಕೊಂಡು ಕೃಷ್ಣರಾಯನು ಒಂದು ವರ್ತಮಾನಪತ್ರವನ್ನು ಓದುತ್ತಿದ್ದನು. ಇದ್ದಕ್ಕಿದ್ದಂತೆಯೇ ದಿವಾಣಖಾನೆಯು ಪತ್ತೇದಾರ ಇನ್ಸಪೆಕ್ಟರ ಹಾಗೂ ಶಿಪಾಯಿಗಳಿಂದ ತುಂಬಿ ಹೋಗಲು, ಅವನು ಬೆಪ್ಪಾದನು!

ಭೀಮಸಿಂಗನು ತಾನು ಅವನ ವಿಷಯದಲ್ಲಿ ಕಂಡು ಹಿಡಿದ ಒಂದೊಂದೇ ತಂತ್ರಗಳನ್ನು ವಿವರಿಸಹತ್ತಿದನು. ತಾನು ಹೈದರಾಬಾದಿಗೆ ಹೋದುದನ್ನೂ ಮತ್ತು ಕೃಷ್ಣರಾಯನು ಚಕ್ರಪಾಣಿರಾಯರ ಅಳಿಯನಲ್ಲವೆಂಬದನ್ನೂ ಸ್ಪಷ್ಟವಾಗಿ ವಿವರಿಸಲು, ಕೃಷ್ಣರಾಯನ ಮುಖವು ಕೃಷ್ಣವರ್ಣವನ್ನೇ ಹೊಂದಿತು! ಕೃಷ್ಣರಾಯನು ಚಂಚಲೆಯ ಅಣ್ಣನ ಮಗನೆಂದು ಹೇಳಿಕೊಂಡುದನ್ನೂ ತಾನು ಚಂಚಲೆಗೆ ಅಣ್ಣ-ತಮ್ಮಂದಿರಿಲ್ಲದ ವಿಷಯವನ್ನು ತಿಳಿದ ಬಗೆಯನ್ನೂ ವಿಸ್ತರಿಸಲು ಕೃಷ್ಣರಾಯನು ತಲೆ ತಿರುಗಿ ಬೀಳುವಂತಾದನು. ಅವನು ಚಂಚಲೆಯ ಮಗನ ಸೋಗು ಹಾಕಿದುದನ್ನೂ, ಚಂಚಲೆಯ ಮಗನು ಬಾಲ್ಯದಲ್ಲಿಯೇ ತೀರಿಕೊಂಡದ್ದನ್ನೂ ಸ್ಪಷ್ಟಪಡಿಸಲು, ಕೃಷ್ಣರಾಯನು ಮೂರ್ಛಿತನಾದನು.

ಅವನಿಗೆ ನೀರು ತಟ್ಟಿದ ನಂತರ ಮೈಯಲ್ಲಿ ಸ್ಮೃತಿಯುಂಟಾಗಲು, ಭೀಮಸಿಂಗನು ತನ್ನ ಮಾತನ್ನು ಮುಂದರಿಸಿದನು.

ಅವನು ಚಂಚಲೆಯ ಕೈಯಿಂದ ರೂಪಾಯಿಗಳನ್ನು ಎತ್ತಿ ಹಾಕಿದ ಬಗೆಯನ್ನೂ ಅವನು ಬರೆದ ಪತ್ರಗಳ ಒಕ್ಕಣಿಕೆಯನ್ನೂ ಒಡೆದೊಡೆದು ಹೇಳಲು, ಅವನು ಬಹು ಕಳೆಗುಂದಿದನು. ಕಳವಿನ ರಾತ್ರಿ ಊಟದ ವೇಳೆಯಲ್ಲಿ ಅವನು ಸಾಂಕೇತಿಕ ಶಬ್ದವನ್ನು ಅರಿತ ಬಗೆಯನ್ನೂ, ಚಂಚಲೆಯನ್ನು ಬಲಾತ್ಕರಿಸಿ ಗುಂಡೇರಾಯನಿಗೆ ಮೋಸ ಮಾಡಿ ೫೦,೦೦೦ ರೂಪಾಯಿಗಳನ್ನು ಎತ್ತಿ ಹಾಕಿದ ದುಷ್ಕೃತ್ಯವನ್ನೂ ವಿವರಿಸಲು, ಕೃಷ್ಣರಾಯನು ಗಟ್ಟಿಯಾಗಿ ಚೀರಿ, ಕೆಳಕ್ಕೆ ಬಿದ್ದು ಬಿಟ್ಟನು! ಈ ಸಲ ಮಾತ್ರ ಕೃಷ್ಣರಾಯನು ನೀರು ತಟ್ಟಿದರೂ ಮೇಲಕ್ಕೇಳಲಿಲ್ಲ! ವೈದ್ಯರು ಬಂದು ಎದೆಯೊಡೆದು ಸತ್ತಿದ್ದಾನೆಂದು ಹೇಳಿಬಿಟ್ಟರು!!

ಇನ್ಸಪೆಕ್ಟರನೂ ಭೀಮಸಿಂಗನೂ ದುಃಖಿತರಾದರು. ಏಕೆಂದರೆ ಕೋರ್ಟಿನಲ್ಲಿ ಕೃಷ್ಣರಾಯನ ಕೈಫಿಯತ್ತನ್ನು ತೆಗೆದುಕೊಂಡಿದ್ದರೆ, ಹೆಚ್ಚು ಕೀರ್ತಿಯು ಬರುವ ಸಂಭವವಿತ್ತು.

ನಡೆದ ಸಂಗತಿಗಳನ್ನು ವಿವರಿಸಿ, ಗುಂಡೇರಾಯನಿಗೂ ರಘುನಾಥರಾಯನಿಗೂ ಪತ್ರಗಳನ್ನು ಬರೆಯಿಸಲಾಯಿತು.

## ೧೦ ವಿಚಿತ್ರದ ಮೇಲೆ ವಿಚಿತ್ರ!

### Unity in diversity.

ಭೀಮಸಿಂಗನು ನಿಜಸ್ಥಿತಿಯನ್ನು ಕಂಡು ಹಿಡಿದ ವಿಷಯವು ಊರಲ್ಲೆಲ್ಲ ಹಬ್ಬಿತು. ಕೂಡಲೆ ಗುಂಡೇರಾಯನೂ, ಚಂಚಲೆಯೂ, ಇಂದುಮತಿಯೂ, ರಘುನಾಥರಾಯನೂ ತಮ್ಮ ಕೃತಜ್ಞತೆಯನ್ನು ವ್ಯಕ್ತಪಡಿಸಲು ಅವನ ಮನೆಗೆ ಬಂದರು.

ಹರಿಣಿಯು ಎಲ್ಲರನ್ನೂ ಬರಮಾಡಿ, ಭೀಮಸಿಂಗನನ್ನು ಕರೆಯಲು ಒಳಗೆ ಹೋದಳು. ಮರುಕ್ಷಣದಲ್ಲಿ ಭೀಮಸಿಂಗನು ಒಪ್ಪುವ ಪೋಷಾಕಿನೊಡನೆ ಹೊರಕ್ಕೆ ಬಂದನು.

ಗುಂಡೇರಾಯನೂ ಚಂಚಲೆಯೂ ಪತ್ತೇದಾರನನ್ನು ಕಂಡು, ಹಿಡಿಸಲಾರದಷ್ಟು ಆನಂದಭರಿತರಾಗಿ, ಅವನಿಗೆ ತಮ್ಮ ಧನ್ಯವಾದಗಳನ್ನರ್ಪಿಸಿದರು.

ಇಂದುಮತಿಯು ಆಶ್ಚರ್ಯದಿಂದ ಜಾದೂಗಾರನು ಇಲ್ಲಿ ಬರಲು ಕಾರಣವೇನೆಂದು ಪ್ರಶ್ನಿಸಿದಳು.

ಹರಿಣಿಯು ಮುಗುಳುನಗೆಯಿಂದ ದಿಕ್ಕುಗಳನ್ನು ನೋಡುತ್ತಿದ್ದಳು.

ಇವೆಲ್ಲವೂ ಏಕಕಾಲದಲ್ಲಿ ನಡೆದು ಹೋದುವು. ಅವರೆಲ್ಲರ ಆಶ್ಚರ್ಯವೂ ಇಮ್ಮಡಿಯಾಗುವಂತೆ ಭೀಮಸಿಂಗನು ತಾನೇ ಬೇರೆ ಬೇರೆ ಕಾಲಗಳಲ್ಲಿ ಬೇರೆ ಬೇರೆ ರೂಪಗಳನ್ನು ಧರಿಸುವುದಾಗಿ ತಿಳಿಯ ಹೇಳಿದನು.

ಯಾರ ಮನಸ್ಸಿಗೂ ಕಳಂಕವೆನಿಸಿದಂತೆ ತನ್ನ ಪತ್ತೆಯ ಕಾರ್ಯವನ್ನು ವಿವರಿಸಲು, ಎಲ್ಲರೂ ಅವನನ್ನು ಅಭಿನಂದಿಸಿದರು.

ಇಂತಹ ಅದ್ಭುತ ಕಾರ್ಯವನ್ನು ಮಾಡಿದವನಿಗೆ ಕೊಡಬಹುದಾದ ಬಹುಮಾನವು ಯಾವುದೆಂದು ಎಲ್ಲರೂ ಏಕಕಂಠದಿಂದ ಕೇಳಲು, ರಘುನಾಥ-ಇಂದುಮತಿಯರ ವಿವಾಹ ಮಾಡಿದರೆ ಅದೇ ತನಗೆ ಕೊಡಬಹುದಾದ ಹೆಚ್ಚಿನ ಬಹುಮಾನವೆಂದು ಭೀಮಸಿಂಗನು ಹೇಳಿದನು.

ಅಷ್ಟು ಹೊತ್ತಿಗೆ ಅಲ್ಲಿಗೆ ಬಂದ ಇನ್ಸಪೇಕ್ಟರ್ ಸಾಹೇಬರು ಸರಕಾರದಿಂದ ಭೀಮಸಿಂಗನಿಗೆ ಬಂದಿರುವ ಬಿರುದು-ಬಹುಮಾನಗಳನ್ನು ಹೇಳಲು, ಸಕಲರಿಗೂ ಆನಂದವಾಯಿತು!

## ಉಪಸಂಹಾರ

ಇಲ್ಲಿಗೆ ನಮ್ಮ ಕಥೆಯು ಮುಗಿಯಿತು. ದುರ್ಘಟವಾದ ಕಳವು ಪತ್ತೆ ಮಾಡಲ್ಪಟ್ಟುದಕ್ಕಾಗಿ ಭೀಮಸಿಂಗನಿಗೆ ಪತ್ತೇದಾರ ಇನ್ಸಪೆಕ್ಟರನ ಕೆಲಸವನ್ನು ಕೊಟ್ಟರು. ಹರಿಣಿಯ ಸಹಾಯದಿಂದ ಅವನು ಹೆಚ್ಚು ಹೆಚ್ಚು ಚಿತ್ರಮಯ ಅಪರಾಧಗಳನ್ನು ಶೋಧ ಮಾಡಹತ್ತಿದನು.

ಭೀಮಸಿಂಗನ ಕೇಳಿಕೆಯಂತೆ ರಘುನಾಥ-ಇಂದುಮತಿಯರ ವಿವಾಹವು ಬಹಳ ವಿಜೃಂಭಣೆಯಿಂದ ನೆರೆಯಿತು.

ಗುಂಡೇರಾಯನಿಗೆ ವಿರಾಮವೇತನ (Pension)ವು ದೊರೆತ ನಂತರ, ರಘುನಾಥರಾಯನೇ ಬ್ಯಾಂಕಿನ ಮ್ಯಾನೇಜರನಾದನು.

[R. N. MALGI



# ಸಾಭಾರ ಸ್ವೀಕಾರ ಮತ್ತು ಅಭಿಪ್ರಾಯ.

**ಖಾದೀ ಮಹಿಮಾ:**— ಬರೆದವರು ಶ್ರೀಯುತ, ಎ. ಎಸ್. ಸೂರ್ಯನಾರಾಯಣರಾಯರು. ಇದು ಬೆಂಗಳೂರ ನಗರದ ಕಲಾಮಂದಿರದ ಮ್ಯಾನೇಜರರಿಂದ ಪ್ರಸಿದ್ಧವಾಗಿದೆ. ಬೆಲೆ ೧ ಆಣೆ. ಖಾದಿಯಿಂದ ಆರ್ಥಿಕ ಉನ್ನತಿಯು ಹ್ಯಾಗಾಗುವದೆಂಬದನ್ನೂ, ಖಾದಿಯನ್ನು ಹ್ಯಾಗೆ ಸಿದ್ಧ ಮಾಡ ಬೇಕೆಂಬದನ್ನೂ ಇದರಲ್ಲಿ ಚನ್ನಾಗಿ ಸಚಿತ್ರವಾಗಿ ವಿವರಿಸಲ್ಪಟ್ಟಿದೆ.

**ಜಯಂತೀ ಕ್ಷೇತ್ರ:**—ಲೇಖಕರು, ರಾ. ರಾ. ಮೂಗೂರು ಹನುಮಂತಾಚಾರ್ಯರು, ಕನ್ನಡಶಾಲೆಯ ಹೆಡ್‌ಮಾಸ್ತರ ಆನವಟ್ಟಿ. ಬೆಲೆ ೧೦ಆ. ಇದು ಗೀರ್ವಾಣಭಾಷೆಯಲ್ಲಿ ಬರೆಯಲ್ಪಟ್ಟ ಬನವಾಸೀ ಕ್ಷೇತ್ರದ ಮಾಹಾತ್ಮ್ಯದ ಕನ್ನಡ ಭಾಷಾಂತರವು. ಬನವಾಸೀಕ್ಷೇತ್ರದ ಮಹಿಮೆಯನ್ನು ತಿಳಿದು ಕೊಳ್ಳುವ ಕನ್ನಡ ಜಿಜ್ಞಾಸುಗಳೂ, ಕನ್ನಡ ಭಾಷಾಭಿಮಾನಿಗಳೂ ಇದನ್ನು ಅತ್ಯವಶ್ಯವಾಗಿ ಓದತಕ್ಕದ್ದು. ಭಾಷಾಂತರವು ಚನ್ನಾಗಿ ಸಾಧಿಸಿದೆ.

**ಅರಕಾನದ ರಾಣಿ:**—ಲೇಖಕರು, ಮೂಗೂರು ಹನುಮಂತಾಚಾರ್ಯರು, ಕನ್ನಡಶಾಲೆಯ ಹೆಡ್‌ಮಾಸ್ತರ ಆನವಟ್ಟಿ. ಬೆಲೆ ೬ ಆಣೆ. ಇದೊಂದು ಮನೋರಂಜಕವಾದ ಐತಿಹಾಸಿಕ ಕಾದಂಬರಿಯು. ಕಥಾಭಾಗವು ಬಹು ಸುರಸವಾಗಿದೆ.

**ಪುಲ್ಲಯ್ಯನ ಪ್ರಬಂಧಗಳು:**— ಬರಹಗಾರರು, ಬಿ. ಎಮ್. ಜಿ. ವಿ. ಪ್ರಕಾಶಕರು 'ವಿನಾಯಕ ಪ್ರಕಟನಾಲಯ' ಬಸವನಗುಡಿ ಬೆಂಗಳೂರ. ೨ ಭಾಗಗಳು ಬಂದಿವೆ. ಈ ಹಾಸ್ಯರಸಪ್ರಧಾನವುಳ್ಳ ಕಥೆಗಳು ಆಬಾಲ-ವೃದ್ಧರ ಮನರಂಜನ ಮಾಡುವವು. ಪ್ರತಿಭಾಗಕ್ಕೆ ೧ ಆಣೆ.

**ಮಾನಸ ಸರೋವರ** ಮತ್ತು **ಕೈಲಾಸಕ್ಷೇತ್ರ** ಯಾತ್ರಾ ಪ್ರಕರಣವು:—ಲೇಖಕರು, ಶ್ರೀಯುತ ಪ. ಸಾ. ಶ್ರೀಕಂಠಶಾಸ್ತ್ರಿಗಳು ಸಂಪಾದಕ 'ಶ್ರೀ ಶಂಕರ ವಿಜಯ' ಮೈಸೂರ. ಕ್ಷೇತ್ರ ವರ್ಣನವು ಉತ್ತಮವಾಗಿಯೂ, ಸಚಿತ್ರವಾಗಿಯೂ ಬರೆಯಲ್ಪಟ್ಟದ್ದರಿಂದ ಪುಸ್ತಕವು ಅನೇಕರಿಗೆ ಮಾನ್ಯವಾಗ ಬಹುದು. ಬೆಲೆ ೮ ಆಣೆ

———

# ಶ್ರೀ ಶೇಷಾಚಲ ಗ್ರಂಥಮಾಲೆಯ

ಈ ಮೂರೂ ಪುಸ್ತಕಗಳು } **ಹೊಸ ಪುಸ್ತಕಗಳು** { ತಾ|| ೨೫ನೇ ಜುಲಯಿಗೆ ರವಾನಿಸಲ್ಪಡುವವು.

**೧ ಚಂದ್ರಕಾಂತ:**—ಸುಮನೋಹರವಾದ ಸಾಮಾಜಿಕ ಕಾದಂಬರಿ. ಕ್ರೌನ ಪುಟ ೧೫೦ ಬೆಲೆ ೧೦ ಆಣೆ.

**೨ ಶ್ರೀ ಟೇಂಬೇ ಮಹಾರಾಜರು:**—ಗದ್ಯ-ಪದ್ಯಯುಕ್ತವಾದ ಅತ್ಯಂತ ಬೋಧಪ್ರದ ಚರಿತ್ರ. ಕ್ರೌನ ಪುಟ ೧೬೮ ಬೆಲೆ ೧೦ ಆಣೆ.

**೩ ಸತ್ಯಮೇವಜಯತೆ:**—೨ನೇ ಪುಲಿಕೇಶಿಯ ಕಾಲದ ಹೃದಯಂಗಮ ಐತಿಹಾಸಿಕ ಕಾದಂಬರಿ. ಕ್ರೌನ ಪುಟ ೧೮೦ ಬೆಲೆ ೧೨ ಆಣೆ.

ಎರಡು ರೂಪಾಯಿ ಮ. ಆ. ಕಳಿಸುವವರಿಗೆ ಈ ಮೂರೂ ಪುಸ್ತಕಗಳನ್ನು ಟಪಾಲ ಖರ್ಚಿನ ೫ ಆಣೆ ನಾವೇ ವಹಿಸಿ ರೆಜಿಸ್ಟರ ಮೂಲಕ ಕಳಿಸುತ್ತೇವೆ.

ಅಲ್ಲದೆ ಈ ಮೊದಲಿನ ನಮ್ಮ ಗ್ರಂಥಮಾಲೆಯ ಕಾಯಂ ಗ್ರಾಹಕರಿಗೂ ಟ. ಖ. ನಾವೇ ವಹಿಸಿ ಎರಡೇ ರೂಪಾಯಿಗೆ ಮೇಲಿನ ಮೂರೂ ಪುಸ್ತಕಗಳನ್ನು ವ್ಹಿ. ಪಿ. ಮೂಲಕ ಕಳಿಸುತ್ತೇವೆ. ಆದ್ದರಿಂದ ಬೇಗನೆ ಗ್ರಂಥಮಾಲೆಗೆ ಕಾಯಂ ಗ್ರಾಹಕರಾಗಿ ಆರ್ಡರು ಕಳಿಸಿರಿ.

ಭಿ. ಪ. ಕಾಳೆ,

ತಾ|| ೧ ೬-೧೯೩೨ ವ್ಯಾ. ಶ್ರೀ. ಶೇ. ಗ್ರ. ಆನಂದವನ.

---

**ಕಂಕಣಚೋರ**—ಮನೋಹರವಾದ ಐತಿಹಾಸಿಕ ಕಾದಂಬರಿ
೨ನೇ ಆವೃತ್ತಿ ಬೆಲೆ ೧ ರೂ ೪ ಆಣೆ

**ಹಂಸಾ**—ಸುಮನೋಹರವಾದ ಐತಿಹಾಸಿಕ ಕಾದಂಬರಿ ಬೆಲೆ ೧| ರೂ.

**ಮರಾಟರೂ-ಇಂಗ್ಲಿಷರೂ**—೧-೨ ಭಾಗ ಸಂಪೂರ್ಣ ಬೆಲೆ ೧| ರೂ

**ಶ್ರೀ ಸಮರ್ಥ ರಾಮದಾಸರು**—ಇವರ ಜೀವನ ಚರಿತ್ರೆಯು
ಬೆಲೆ ೧ ರೂ ೨ ಆಣೆ

**ದಾಸಬೋಧ**—ಕನ್ನಡ ಭಾಷಾಂತರ ಸಂಪೂರ್ಣ ಪುಟ ೮೩೦
ಬೆಲೆ ೬ ರೂಪಾಯಿ

**ತುಕಾರಾಮ ಬುವಾ**—ಇವರ ಜೀವನ ಚರಿತ್ರೆಯು ಬೆಲೆ ೧ ರೂ

ಭಿ. ಪ. ಕಾಳೆ, ಆನಂದವನ.